# ಸಿದ್ಧಗಂಗಾ

ಸಂಪುಟ-೨೬. ಸಂಚಿಕೆ-೯. ಸೆಪ್ಟಂಬರ್-೧೯೯೦.

ಒಬ್ಬ ಗೃಹಸ್ಥ ತಪ್ಪುಮಾಡಿದರೆ ಅದರ ಫಲವನ್ನು ಅವನ ಕುಟುಂಬ
ಅನುಭವಿಸಬೇಕಾಗತ್ತದೆ. ಆದರೆ ಒಬ್ಬ ಸ್ವಾಮಿ ತಪ್ಪುಮಾಡಿದರೆ
ಅದರ ಫಲವನ್ನು ಸಮಾಜ ಅನುಭವಿಸಬೇಕಾಗುತ್ತದೆ.
ಚಾರಿತ್ರ್ಯ ಶುದ್ಧಿ, ವಿದ್ವತ್ತು, ಕ್ರಿಯಾಶೀಲತೆ,
ಎಲ್ಲಕ್ಕೂ ಮಿಗಿಲಾಗಿ ಎಲ್ಲ ನನ್ನವರೆನ್ನುವ
ಮಾನವೀಯತೆ ಸ್ವಾಮಿಗಳಿಗೆ
ಅಗತ್ಯವಾಗಿರ ಬೇಕಾದ
ಗುಣಗಳು.

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

# ಸಿದ್ಧಗಂಗಾ

ಸಂಪುಟ–೨೬ ಸಂಚಿಕೆ–೯. ಸೆಪ್ಟಂಬರ್–೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

" ಸದ್‌ಭಕ್ತಿಯಾಚಾರ ಸುಜ್ಞಾನ ಜ್ಯೋತಿಯೇ "
ಕೈಲಾಸ ಕಾಯಕದ ಶ್ರೀ ಶ್ರಮವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು!

ಕಲ್ಯಾಣ ಬಸವನ ಬೆಳಗಿನ ಬೆಳಗಾಗಿರುವ
" ಸರ್ವಾಂಗದೊಳಗೆಲ್ಲ "। ತುಳುಕಿರುವ। ಶ್ರೀ ಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಅನುವರಿದು ಘನವಿಡಿದು ಹಿರಿ ಕಿರಿದ ತೊರೆದಿರುವ
ಕರಸ್ಥಲದ ಜ್ಯೋತಿಯೊಳು ಬೆರೆಯುತ । ಬೆಳಗಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹೆಚ್. ವಿ. ವೀರಭದ್ರಯ್ಯ

# ಶ್ರೀ ಸಿದ್ಧಲಿಂಗೇಶ್ವರ ವಚನ



ಮರವೆಯ ತಮನ ಕಳೆಯಯ್ಯ.
ಅರಿವಿನ ಜ್ಯೋತಿಯ ಬೆಳಗಯ್ಯ.
ಅರಿವಿನ ಜ್ಯೋತಿಯ ಬೆಳಗಿ,
ನಿಮ್ಮ ಕುರುಹಕಂಡು ಕೂಡುವ
ತುರಿಯಾವಸ್ಥೆಯ ಸುಖವಕೊಡು ಕಂಡ ಲಿಂಗತಂದೆ.
ಕೊಡದಿರ್ದೊಡೆ ನಿಮಗೆ ಪ್ರಮಥರಾಣೆ; ಬಸವಣ್ಣನಾಣೆ
ಮಹಾಲಿಂಗ ಗುರು ಶಿವ ಸಿದ್ದೇಶ್ವರಪ್ರಭುವೇ.

ಅಜ್ಞಾನವೆಂಬ ಕತ್ತಲೆಯನ್ನು ಕಳೆಯಯ್ಯಾ ಎಂದು ಸುಜ್ಞಾನದಿಂದ ನಿವೃತ್ತಿಯನ್ನು ಮಾಡೆಂದು ಶಿಷ್ಯನು ಶ್ರೀ ಗುರುವನ್ನು ಬೇಡುತ್ತಾನೆ. ಮುಂದುವರಿದು ತನ್ನ ಸರ್ವಾಂಗದಲ್ಲಿ ಸುಜ್ಞಾನದ ಬೆಳಕನ್ನು ಬೆಳಗಿಸೆನ್ನುತ್ತಾನೆ. ಅದರಿಂದ ಮಹಾಲಿಂಗದಲ್ಲಿ ಏಕಾರ್ಥವಾಗುವ ನಾದಾನು ಸಂಧಾನದ ಜ್ಞಾನಪರಣಾಮವನ್ನು ನೀಡು ಎಂಬುದಾಗಿ ಬೇಡುತ್ತ, ಅಂತಹ ಸುಜ್ಞಾನೋದಯವನ್ನು ನೀಡದೇ ಹೋದರೆ ನಿಮಗೆ ಬಸವಾದಿ ಪ್ರಮಥಗಣಗಳ ಮೇಲಾಣೆ ಎಂಬುದಾಗಿ ಪ್ರತಿಜ್ಞೆ ಮಾಡುತ್ತ, ಶರಣರು ಲಿಂಗದಕೂಡೆ ಕೂಡುವ ಲಿಂಗವಿಕಳಾವಸ್ಥೆಯ ಸ್ತೋತ್ರದ ಪರಿಯನ್ನು ವಚನ ವಿವರಿಸುತ್ತದೆ.

# ಸಿದ್ಧಗಂಗಾ

ಪ್ರಧಾನ ಸಂಪಾದಕರು
ಪ್ರಾ॥ ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಅಜೀವ ಸದಸ್ಯತ್ವ 250-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ



# ಶ್ರೀವಾಣಿ

ಸಾವು ಸೃಷ್ಟಿಯಲ್ಲಿ ಹುಟ್ಟುವ ಪ್ರತಿಯೊಂದು ಜೀವಿಯೂ ಅನುಭವಿಸಬೇಕಾದ ಒಂದು ಅನಿವಾರ್ಯಘಟನೆ. ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದರೆ ಅದಕ್ಕೆ ಸಾರ್ಥಕತೆಯನ್ನು ತಂದುಕೊಡುವ ಪ್ರಯತ್ನ ಪವಿತ್ರವಾದುದು. ಹುಟ್ಟು ಸಾವಿನ ಮಧ್ಯೆ ಇರುವ ಬಾಳು ಅದನ್ನು ನಿರ್ಧರಿಸುತ್ತದೆ; ನಿರ್ಧರಿಸಬೇಕು. ಬಾಳು ಕೇವಲ ಉಂಡು, ಉಟ್ಟು, ನಿದ್ದೆಗೈದು ಕಳೆದು ಹೋಗಲಿಕ್ಕಿಲ್ಲ. ಪ್ರತಿಯೊಂದು ಜೀವಯ ಹುಟ್ಟಿಗೂ ಒಂದು ಉದ್ದೇಶವಿದ್ದೇ ಇರುತ್ತದೆ. ಅದನ್ನು ತಿಳಿದು ಬಾಳುವ ಕಲೆಯನ್ನು ಅರಿತು ಜೀವಿಸುವ ಜಾಣ್ಮೆಬೇಕು. **ನೂರು ವರ್ಷ ಲೋಕ ಕಂಟಕವಾಗಿ ಬಾಳುವುದಕ್ಕಿಂತ ಮೂರು ವರ್ಷ ಲೋಕೋಪಕಾರಿಯಾಗಿ ಬಾಳುವಗುರಿನಮ್ಮದಾಗಬೇಕು** ಭಗವಾನ್ ಬಸವಣ್ಣನವರು ಹೇಳುವಂತೆ —

"ಲೇಸೆನಿಸಿಕೊಂಡು ಐದುದಿನ ಬದುಕಿದರೇನು ?
ಲೇಸೆನಿಸಿಕೊಂಡು ನಾಲ್ಕುದಿನ ಬದುಕಿದರೇನು ?
ಲೇಸೆನಿಸಿಕೊಂಡು ಮೂರುದಿನ ಬದುಕಿದರೇನು ?
ಲೇಸೆನಿಸಿಕೊಂಡು ಎರಡುದಿನ ಬದುಕಿದರೇನು ?

ಜೀವಿತಂ ಶಿವಭಕ್ತಾನಾಂ। ವರಂ ಪಂಚದಿನಾನಿ ಚ।
ನಾಜಕಲ್ಪ ಸಹಸ್ರಂತು। ಭಕ್ತಿಹೀನಂತು ಶಂಕರೀ॥

ಎಂದುದಾಗಿ, ಕೂಡಲ ಸಂಗನ ಶರಣರ ವಚನದಲ್ಲಿ, ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೋ? ಬದುಕುವ ರೀತಿ ಮುಖ್ಯ, ಹದಮುಖ್ಯ, ವಿಧಾನಮುಖ್ಯವೇ ಹೊರತು ಬದುಕುವ ಅವಧಿ ಮುಖ್ಯವಲ್ಲ. ಇರುವಷ್ಟುದಿನ ಲೋಕಕ್ಕೆ ಬೇಕಾಗಿ ಬದುಕುವ ಬದುಕಿಗೆ ಬೆಲೆಯೇ ಹೊರತು ಅನ್ಯಥಾ ಅಲ್ಲ. ಜನಪದಗೀತೆಯೊಂದು ಹೇಳುವಹಾಗೆ "ಲೋಕದಾಗಿರುವನಕ ಬೇಕಾಗಿ ಇರಬೇಕು। ಸಾಕಾಗಿ ಶಿವನಸದರಿಗೆ ಹೋಗಾಗ। ಎಲ್ಲಾರು ಬರುತಾರೆ ಕಳಿಸಾಕ॥ ಎನ್ನುವಂತೆ ಬಾಳುವಬಾಳಿಗೆ ಅರ್ಥ ಬರುತ್ತದೆ. ಅಣ್ಣನವರು ಹೇಳಿರುವಂತೆ

" ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ.
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ "

ಸಲ್ಲುವಂತೆ ಬದುಕಬೇಕು. ಜೀವನದುದ್ದಕ್ಕೂ ಹಲವು ಹನ್ನೊಂದಕ್ಕೆ ಸಾಯುವುದನ್ನು ಕಾಣುತ್ತೇವೆ. ಆದರೆ ದೇವರಿಗಾಗಿ ಸಾಯುವವರನ್ನು ಕಾಣಲಾರೆವು

" ಆಸೆಗೆ ಸತ್ತುದು ಕೋಟಿ. ಆಮಿಷಕ್ಕೆ ಸತ್ತುದು ಕೋಟಿ.
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ. ಗುಹೇಶ್ವರಾ –

ನಿಮಗಾಗಿ ಸತ್ತವರಾರನೂ ಕಾಣೆ–ಎನ್ನುವ ಪ್ರಭುದೇವರ ವಾಣಿ ಅದೆಷ್ಟು ಸತ್ಯ. ಜೀವನವೆಂಬುದು ದೇವರು ಕೊಟ್ಟ ಕುದುರೆ ಅದನ್ನು ಸಮರ್ಥವಾಗಿ ಸವಾರಿ ಮಾಡುವ ಕಲೆಯನ್ನು ಕಲಿತಾಗಲೇ ಅದಕ್ಕೆ ಬೆಲೆ. ಭೌತಿಕ ಶರೀರಕ್ಕೆ ಬರುವ ಸಾವಿಗೆ ಅಂಜಬಾರದು, ಅಳುಕ ಬಾರದು, ದೇವರು ಕೊಟ್ಟ ಕಾಯಕವೆಂಬುದು ಅಮೂಲ್ಯ ಆಭರಣ. ಅದನ್ನು ಒಪ್ಪವಾಗಿ ನೋಡಿಕೊಳ್ಳ ಬೇಕು, ಲಾಲನೆ ಪಾಲನೆ ಮಾಡು-
ತ್ತಿರಬೇಕು. " ಕೂಡಲ ಸಂಗನ ಒಲಿಸಲು ಬಂದ ಪ್ರಸಾದಕಾಯ" ಆದು.
" ಅದನ್ನು ಕೆಡಿಸಲಾಗದು " ಸಾವು ನಿಶ್ಚಿತ. ಆದರೆ ಎಂದು ಅನಿಶ್ಚಿತ. ಅದಕ್ಕಾಗಿ
ಚಿಂತಿಸಿ ಫಲವಿಲ್ಲ, ಇರುವಷ್ಟು ದಿವಸ ಸತ್ಯ ಶುದ್ಧಕಾಯಕದಿಂದ ಬದುಕುವುದು
ಮುಖ್ಯ. ಸಾವು ಬರುತ್ತದೆ ಎಂದು ಭಯಪಡಬಾರದು. " ನಾಳೆ ಬಪ್ಪುದು
ನಮಗಿಂದೇಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ. ಇದ-
ಕಾರಂಜುವರು ? ಇದಕ್ಕಾರಳುಕುವರು ? " ಜಾತಸ್ಯ ಮರಣಂ ಧ್ರುವಂ
" ಎಂಬುದಾಗಿ ನಮ್ಮ ಕೂಡಲ ಸಂಗಮ ದೇವ ಬರೆದ ಬರೆಹವ ತಪ್ಪಿಸುವಡೆ
ಹರಿಬ್ರಹ್ಮಾದಿಗಳಿಗಳವಲ್ಲ" ಎಂಬ ದೃಢನಿರ್ಧಾರ ಬೇಕು. ಮೃತ್ಯುಂಜಯ ಮನೋ
ಧರ್ಮಬೇಕು.

(ದಿ. 11. 8-90 ರಂದು ತಟ್ಟೆಕೆರೆಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಸಿದ್ದು)

# ಸಂಪಾದಕೀಯ

**ಶರಣ ಸಾಹಿತ್ಯ ಸಮ್ಮೇಳನ.**

ಅಖಿಲ ಭಾರತ ಶರಣ ಸಾಹಿತ್ಯ ಮೂರನೆಯ ಸಮ್ಮೇಳನ ದಿ 13,14 ಮತ್ತು
15 ಜುಲೈ 90ರಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆಯಲ್ಲಿ ಜರುಗಿತು. ಸಮ್ಮೇಳನದ
ಅಧ್ಯಕ್ಷರಾಗಿ ಪ್ರಖ್ಯಾತ ವಿದ್ವಾಂಸರಾದ ಡಾ|| ಎಲ್. ಬಸವರಾಜುರವರು ಮೂರು
ದಿವಸಗಳ ಸಮ್ಮೇಳನದ ಎಲ್ಲ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು. ದಿ 13-7.90
ರಂದು ಬೆಳಗ್ಗೆ ಎಂಟು ಘಂಟೆಗೆ ಷಟ್‌ಸ್ಥಲಧ್ವಜಾರೋಹಣೆಯನ್ನು ಒಳ ಬಳ್ಳಾರಿ
ಮಠದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ನೆರವೇರಿಸಿದರು. ಒಂಬತ್ತು ಘಂಟೆಯಿಂದ
ನಗರದ ಪ್ರಮುಖ ಬೀದಿಗಳಲ್ಲಿ ಶರಣ ಸಾಹಿತ್ಯದ ವೈವಿಧ್ಯ ಪೂರ್ಣವಾದ ಮೆರವಣಿಗೆ
ನಡೆಯಿತು. ಮೆರವಣಿಗೆಯಲ್ಲಿ ಜಾನಪದ ನೃತ್ಯ ತಂಡಗಳು, ಶರಣ ಧರ್ಮ ಜೀವನಕ್ಕೆ
ಸಂಬಂಧಿಸಿದ ಸ್ತಬ್ಧ ಚಿತ್ರಗಳು, ಶಾಲಾ ಕಾಲೇಜುಗಳ ಸಮವಸ್ತ್ರಧಾರಿ ವಿದ್ಯಾರ್ಥಿ
ವಿದ್ಯಾರ್ಥಿನಿಯರು, ಶರಣ ಸಾಹಿತ್ಯದಲ್ಲಿ ಕೃಷಿಮಾಡಿದ ವಿದ್ವಾಂಸರು, ಅಭಿಮಾನಿ
ಗಳು, ಶರಣಸಾಹಿತ್ಯವನ್ನು ಹೊತ್ತ ಸಾಲಂಕೃತ ರಥ, ವಿವಿಧ ಮಠಾಧೀಶರು ವಿಶಿಷ್ಟ
ಉತ್ಸವವಾಗಿ ಮೈದುಳಿದಂತಾಯಿತು. ವಿಜಯನಗರ ಕಾಲೇಜ್‌ಮೈದಾನದಲ್ಲಿ
ನಿರ್ಮಾಣವಾಗಿದ್ದ ಬೃಹತ್ ಸಭಾಮಂಟಪ–ಪ್ರೌಢದೇವರಾಯ ಮಂಟಪ-ಶರಣ-
ಸಾಹಿತ್ಯಾಭಿಮಾನಿಗಳಿಂದ ಕಿಕ್ಕಿರಿದು ಸಮಾವೇಶಗೊಂಡು ಮೈ ಮನಗಳಿಗೆ ಹಬ್ಬ-
ವನ್ನುಂಟು ಮಾಡಿತು. ಹನ್ನೊಂದು ಘಂಟೆಗೆ ಪ್ರಾರಂಭವಾಗ ಬೇಕಾಗಿದ್ದ
ಸಮ್ಮೇಳನದ ಉದ್ಘಾಟನೆ ವಿಳಂಬವಾಗಿ ಉದ್ಘಾಟಿತವಾದರೂ ನೇರವಾಗಿ ಗುರಿ-
ಘೋರಣೆಗಳ ಮುಖಿಯಾಗಿ ಸಾಗಿತು. ಸುತ್ತೂರು ಶ್ರೀ ವೀರಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರಮಹಾಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ,
ಶ್ರೀ ಕೊಟ್ಟೂರುಸ್ವಾಮಿ ಮಠದ ಪೂಜ್ಯ ಶ್ರೀ ಶ್ರೀ ಸಂಗನಬಸವಮಹಾಸ್ವಾಮಿಗಳವರ
ದಿವ್ಯ ಸಾನ್ನಿಧ್ಯದಲ್ಲಿ ಸಮಾರಂಭದ ಕಾರ್ಯಕ್ರಮಗಳು ಪ್ರಾರಂಭವಾದವು. ಸಮ್ಮೇಳ-
ನಾಧ್ಯಕ್ಷರಾದ ಡಾ|| ಎಲ್. ಬಸವರಾಜುರವರು ಮಾತನಾಡುತ್ತ ಒಳಪಂಗಡಗಳ
ಕೃತಕ ಸೃಷ್ಟಿಯಿಂದಾಗಿ ಶರಣಸಮಾಜ, ಸಾಹಿತ್ಯಗಳು ಗೊಂದಲಗಳಿಗೆ ಒಳಗಾದುವು
ಎಂದರಲ್ಲದೆ 'ಜಂಗಮ' ಜಾತಿಯಾಗಿ ಬೆಳೆದು ಬಂದದ್ದು ದುರ್ದೈವವೆಂದರು.
ಲೋಕ ಸಭಾಸದಸ್ಯರಾದ ಶ್ರೀ ಬಸವರಾಜ ಪಾಟೀಲಅನ್ವರಿಯವರು 'ಹೇಮಕೂಟ'
ಸಂಚಿಕೆಯನ್ನು ಬಿಡುಗಡೆ ಮಾಡುತ್ತ ಯುವಜನಾಂಗ ಶರಣಸಾಹಿತ್ಯದತ್ತ ಆಸಕ್ತಿ
ತಾಳಬೇಕೆಂದರು. ಶಾಸಕರಾದ ಶ್ರೀ ಗುಜ್ಜಲ ಹನುಮಂತಪ್ಪನವರು ಗ್ರಂಥಪ್ರದ-
ರ್ಶನವನ್ನು ಉದ್ಘಾಟಿಸಿದರು. ಪೂಜ್ಯ ಶ್ರೀ ಶ್ರೀ ಸಂಗನ ಸ್ವಾಮಿಗಳು ಆಶೀರ್ವಚನ
ನೀಡುತ್ತ ವಿಜಯನಗರ ಕಾಲದ ಸ್ಮರಣೀಯ ಜೀವನವನ್ನು ನೆನಪಿಗೆ ತರುವಂತಿದೆ
ಇಂದಿನ ಸಮ್ಮೇಳನ ಎಂದು, ಸಮಸ್ತರನ್ನು ಆತ್ಮೀಯವಾಗಿ ಆಹ್ವಾನಿಸಿದರು.
ಡಾ|| ಎಚ್. ತಿಪ್ಪೇರುದ್ರಸ್ವಾಮಿಯವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ

ಧ್ಯೇಯೋದ್ದೇಶಗಳನ್ನು ಸಂಕ್ಷಿಪ್ತವಾಗಿ ಪ್ರಾಸ್ತಾವಿಕ ಮಾತುಗಳ ಮೂಲಕ ಪರಿ-
ಚಯ ಮಾಡಿಕೊಟ್ಟರು. ಸಮ್ಮೇಳನದ ಅಂಗವಾಗಿ ಆರು ಗೋಷ್ಠಿಗಳು ನಡೆದು
ವಲ್ಲದೆ 'ಶರಣ ಸಂಗಮ' ಎಂಬ ಸ್ಮರಣ ಸಂಚಿಕೆ, ದ್ವಿತೀಯ ಶರಣ ಸಾಹಿತ್ಯ
ಸಮ್ಮೇಳನದಲ್ಲಿ ಮಂಡಿತವಾದ ಉಪನ್ಯಾಸಗಳ ಸಂಕಲನವಾದ 'ಶರಣತತ್ವ ಚಿಂತನೆ'
ಗ್ರಂಥಗಳು ಬಿಡುಗಡೆಯಾಗುವುದರ ಜೊತೆಗೆ 'ಬಸವ ವಚನ' ಇಂಗ್ಲೀಷ್ ಆವೃತ್ತಿಯೂ
ಪ್ರಕಟವಾಗಿ ಶಾಶ್ವತ ದಾಖಲೆಯಾಯಿತು. ಜಾನಪದದಲ್ಲಿ ಶರಣಸಾಹಿತ್ಯ ಗೋಷ್ಠಿ
ಯಲ್ಲಿ ಪ್ರಬಂಧಗಳನ್ನು ಮಂಡಿಸಿದ ಶ್ರೀ ಮುದೇನೂರು ಸಂಗಣ್ಣನವರು ಡಾ॥
ಮಲ್ಲಿಕಾರ್ಜುನ, ಶಿ. ಲಕ್ಕೈ, ಡಾ॥ ಬಸವರಾಜು, ಮಲಶೆಟ್ಟಿಯವರು, ಶರಣ ಸಾಹಿತ್ಯ
ಜಾನಪದಕ ಜೀವನದಲ್ಲಿ ಸಮ್ಮಿಳಿತವಾಗಿರುವ ವಿವಿಧ ಮುಖಗಳನ್ನು ವಿದ್ವತ್ಪೂರ್ಣ
ವಾಗಿಯೇ ಮಂಡಿಸಿದರು. ಗೋಷ್ಠಿಯ ಅಧ್ಯಕ್ಷತೆವಹಿಸಿದ್ದ ಶ್ರೀಮತಿ ಶಾಂತದೇವಿ
ಮಾಳವಾಡರು ಶರಣ ಧರ್ಮ ಜನಪದರಧರ್ಮ ಹೇಗಾಯಿತೆಂಬುದನ್ನು ವಿವೇಚಿಸಿದರು.
"ವಿಜಯನಗರ ಕಾಲದ ವಚನಸಾಹಿತ್ಯ" ಗೋಷ್ಠಿಯಲ್ಲಿ ಭಾಗವಹಿಸಿದ ವಿದ್ವಾಂಸರಾದ
ಶ್ರೀ ಜಿ. ವಿ. ಶಿವಲಿಂಗಯ್ಯ, ಶ್ರೀಮತಿ ಪದ್ಮ ರಾಜಶೇಖರ್‌ರವರು, ವಚನಗಳ
ಸಂಪಾದನೆ ಮತ್ತು ಸ್ಥಲಕಟ್ಟು ವ್ಯಾಖ್ಯಾನ ಹಾಗೂ ವಚನಕಾರರು ಅನುಸರಿಸಿದ
ಮಾರ್ಗ ಪರಿಚಯ ಮಾಡಿಸಿದರು. ಡಾ॥ ಎಸ್. ಎಂ. ವೃಷಭೇಂದ್ರಪ್ಪಸ್ವಾಮಿಯವರು
ಗೋಷ್ಠಿಯ ಅಧ್ಯಕ್ಷತೆವಹಿಸಿ ಮಾತನಾಡುತ್ತ ವಚನ ಸಾಹಿತ್ಯದ ವ್ಯೆಶಾಲ್ಯವನ್ನು
ವಿಶದಗೊಳಿದರು. 'ವಿಜಯ ನಗರ ಕಾಲದ ವಚನೇತರ ವೀರಶೈವಸಾಹಿತ್ಯ' ಗೋಷ್ಠಿ
ಶ್ರೀ ಕೋ. ಚೆನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ನಡೆದು ಡಾ। ಚೆನ್ನಕ್ಕ ಎಲಿಗಾರ
ಮತ್ತು ಡಾ॥ ಮಲ್ಲಿಕಾರ್ಜುನ ರೆಡ್ಡಿಯವರು ಪ್ರಬಂಧಗಳನ್ನು ಮಂಡಿಸಿದರು.
ಡಾ॥ ಸಿ. ಪಿ. ಕೃಷ್ಣಕುಮಾರ್‌ರವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡ "ಶರಣರು
ಮತ್ತು ಸಮಾಜವಾದ"ದ ಗೋಷ್ಠಿ ಅತ್ಯಂತ ಲವಲವಿಕೆಯಿಂದ ವಿಚಾರಪೂರ್ಣ-
ಮೂಡಿಬರಲು ಕಾರಣರಾದವರು ವಿದ್ವಾಂಸರಾದ ಶ್ರೀ ಡಾ॥ ಎಚ್. ಎಂ. ರಾಜ-
ಶೇಖರ್, ಡಾ॥ ಕೆ. ಅನಂತರಾಮು, ಮತ್ತು ಡಾ॥ ಎಚ್. ಎಂ. ಮರುಳಸಿದ್ದಯ್ಯ
ನವರು. ಪೂಜ್ಯ ಶ್ರೀ ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು ಮುಂಡರಗಿಯವರ
ಅಧ್ಯಕ್ಷತೆಯಲ್ಲಿ "ಶರಣತತ್ವ ದರ್ಶನ" ಗೋಷ್ಠಿ ನಡೆಯಿತು. ಪ್ರೊ। ಕುಂದರಗಿ
ಡಾ॥ ವಿದ್ಯಾಶಂಕರ್, ಶ್ರೀ ಮಹಾಲಿಂಗಯಾಳಗಿಯವರು ಪ್ರಬಂಧಗಳನ್ನು ಮಂಡಿಸಿ
ಚರ್ಚೆಗೆ ಚಿಂತನ ಮಂಥನಗಳಿಗೆ ಅವಕಾಶ ಕಲ್ಪಿಸಿಕೊಟ್ಟರು—ಮಾರ್ಗದರ್ಶನ
ಮಾಡಿದರು. ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾದ ಪ್ರೊ। ಜಿ. ಎಸ್. ಸಿದ್ಧ-
ಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ನಡೆದ "ವಚನಗೋಷ್ಠಿ"ಯಲ್ಲಿ ಭಾಗವಹಿಸಿ ಶ್ರೀ
ಎಚ್. ಗಂಗಾಧರನ್, ಪ್ರೊ. ಸಂಗಮೇಶಹೊಸಮನಿ, ಶ್ರೀ ಬಸವರಾಜ ಸುರಪುರ,
ಶಿವಲಿಂಗಮ್ಮ ಕಟ್ಟಿ, ಶ್ರೀ ಮಹಾಲಿಂಗಯಾಳಗಿ, ಪ್ರೊ. ಇಟಗಿ ವೀರಣ್ಣ, ಶ್ರೀಮತಿ
ಗಂಗಮ್ಮಹೊಸಮನಿಯವರು, ಸ್ವರಚಿತ ವಚನಗಳನ್ನು ವಾಚಿಸಿದರು. ವೈಶಿಷ್ಟ್ಯಪೂ
ರ್ಣವಾದ ಈ ಗೋಷ್ಠಿಯ ರೂಪರೇಷೆಗಳನ್ನು ವಚನ ಸಾಹಿತ್ಯದ ನಿರಂತರತೆಯನ್ನು

ಅಧ್ಯಕ್ಷರು ವಿವರಿಸಿದರು. ಬಹಿರಂಗ ಅಧಿವೇಶನ ಅಖಿಲ ಭಾರತ ಶರಣಸಾಹಿತ್ಯ
ಪರಿಷತ್ತಿನ ಅಧ್ಯಕ್ಷರಾದ ಡಾ॥ ತಿಪ್ಪೇರುದ್ರಸ್ವಾಮಿಯವರ ಅಧ್ಯಕ್ಷತೆಯಲ್ಲಿ ಜರುಗಿ
ಹಲವು ನಿರ್ಣಯಗಳನ್ನು ಕೈಗೊಂಡಿತು. ಸಮ್ಮೇಳನದ ಸಮಾರೋಪ ಸಮಾರಂಭ
ಪೂಜ್ಯ ಶ್ರೀ ತೋಂಟದಾರ್ಯ ಜಗದ್ಗುರು ಶ್ರೀ ಶ್ರೀ ಸಿದ್ಧಲಿಂಗಶಿವಾಚಾರ್ಯ
ಮಹಾಸ್ವಾಮಿಗಳು ಗದಗ-ಡಂಬಳದವರ ದಿವ್ಯಸಮ್ಮುಖದಲ್ಲಿ ಜರುಗಿತು. ಸಮಾರಂಭದ
ಅಂಗವಾಗಿ ಶರಣಸಾಹಿತ್ಯ, ಕಲೆ, ಧರ್ಮಗಳಿಗೆ ಸೇವೆ ಸಲ್ಲಿಸಿದ ಪುಣ್ಯ ಶ್ರೀ ಗಳಾದ
ಪೂಜ್ಯ ಶ್ರೀ ಶ್ರೀ ಶಿವಬಸವಸ್ವಾಮಿಗಳು ಡಾ॥ ಪುಟ್ಟರಾಜಗವಾಯಿಗಳು, ಪಂಡಿತ
ನಾಗಭೂಷಣಶಾಸ್ತ್ರಿಗಳು, ಡಾ॥ಬಾಡಾಲರಾಮ್ಯಯ, ಡಾ॥ಸಿಂಪಿಲಿಂಗಣ್ಣನವರುಗಳನ್ನು
ಸನ್ಮಾನಿಸಲಾಯಿತು. ಪೂಜ್ಯ ಶ್ರೀ ಶ್ರೀ ಸುತ್ತೂರು ಜಗದ್ಗುರುಗಳಾದ ಶ್ರೀ ಶ್ರೀ
ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು ಸಮಾರಂಭದಲ್ಲಿ ಆಶೀರ್ವಚನ ನೀಡುತ್ತ,
ಪೂಜ್ಯ ಲಿಂಗೈಕ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳವರ ದಾರ್ಶನಿಕ
ದೃಷ್ಟಿಯ ಕಾರುಣ್ಯದಿಂದಾಗಿ ಸಂಸ್ಥಾಪಿತವಾದ ಅಖಿಲಭಾರತ ಶರಣ ಸಾಹಿತ್ಯ
ಪರಿಷತ್ತಿನ ಮೂರನೆಯ ಸಮ್ಮೇಳನ ಹೊಸಪೇಟೆಯಲ್ಲಿ ನಡೆಯಲು ಕಾರಣರಾದ
ಸಮಸ್ತ ಶರಣಾಭಿಮಾನಿಗಳನ್ನು ಸ್ಮರಿಸಿದರು. ಸಮ್ಮೇಳನದ ಅಂಗವಾಗಿ ವಿವಿಧ
ಸಾಂಸ್ಕೃತಿಕ ಕಾರ್ಯಕ್ರಮಗಳು ಪ್ರದರ್ಶನಗೊಂಡವು. ಹದಿನೈದು ಶರಣಸಾಹಿತ್ಯ
ಗ್ರಂಥಪ್ರದರ್ಶನ, ಮಾರಾಟದ ಮಳಿಗೆಗಳು ಭಾಗವಹಿಸಿ ಸಮ್ಮೇಳನದ ಶೋಭೆಗೆ
ಮೆರುಗುತ ಂದವು. ಶ್ರೀ ಸಿದ್ಧಗಂಗಾಮಠದ ಪ್ರಕಾಶನ ಮಳಿಗೆಯಲ್ಲಿ ಮಾರಾಟವಾದ
ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರಿಂದ ರಚಿತವಾದ ಬಸವಣ್ಣವವರನ್ನು ಕುರಿತ
ಬೃಹತ್‌ಕಾದಂಬರಿ "ಕರ್ತಾರನಕಮ್ಮಟ"ದ ನಾಲ್ಕುನೂರಾ ಇಪತ್ತು ಪ್ರತಿಗಳು
ಶರಣಸಾಹಿತ್ಯಾಸಕ್ತರ ಕೈಯಲ್ಲಿ ಕಾಣಬರುತ್ತಿದ್ದುದು ಆತ್ಮೀಯವಾಗಿತ್ತು. ಸಮ್ಮೇಳನ
ಯಶಸ್ವಿಯಾಗಿ ನಡೆಯಿತು. ಮೂರು ದಿವಸಗಳಲ್ಲಿ ಭಾಗವಹಿಸಿದ್ದ ಎಲ್ಲಾ ಶರಣ
ಪ್ರೇಮಿಗಳಿಗೆ ಅತ್ಯಂತ ವ್ಯವಸ್ಥಿತವಾಗಿ ಊಟ-ವಸತಿಗಳನ್ನು ಏರ್ಪಡಿಸಿದ್ದು ತುಂಬಾ
ತೃಪ್ತಿಕರವಾಗಿತ್ತು.

### ಕನಕಪುರದಲ್ಲಿ ಶರಣಸಾಹಿತ್ಯ ಸಮ್ಮೇಳನ

ಬೆಂಗಳೂರು ಜಿಲ್ಲಾ ಶರಣಸಾಹಿತ್ಯ ಪರಿಷತ್ತಿನ ಪ್ರಥಮ ಸಮ್ಮೇಳ ದಿ 14-8-90
ರಂದು ಕನಕಪುರದ ದೇಗುಲ ಮಠದಲ್ಲಿ ಜರುಗಿತು. ಪೂಜ್ಯ ಲಿಂಗೈಕ್ಯ ಶ್ರೀ ಶ್ರೀ
ಮಹಾಲಿಂಗಸ್ವಾಮಿಗಳ ತೃತೀಯ ಪುಣ್ಯಾರಾಧನಾ ಸಂದರ್ಭದಲ್ಲಿ ನೆರವೇರಿದ
ಸಮ್ಮೇಳನವನ್ನು ಉದ್ಘಾಟಿಸಿದ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾದ ಪರಮ
ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು "ಇಂದು ಶರಣ ಧರ್ಮ ಜಗತ್ತನ್ನು
ಉಳಿಸಬೇಕಾಗಿದೆ. ಅಪಾಯದ ಅಂಚಿನಲ್ಲಿರುವ ವಿಶ್ವದ ಮನುಕುಲವನ್ನು ಪಾರು
ಮಾಡಬೇಕಾಗಿದೆ. ಬಸವಾದಿ ಶರಣರು ಆಚರಿಸಿ ತೋರಿಸಿದ ಶರಣತತ್ವಗಳನ್ನು
ಪಾಲಿಸಿದರೆ ಮಾತ್ರ ಕಲ್ಯಾಣವಾದೀತು"ಎಂದು ನುಡಿದರು.

ಸಮ್ಮೇಳನಾಧ್ಯಕ್ಷರಾದ ಮಾನ್ಯ ಶ್ರೀ ಬಿ. ನಂಜುಂಡಪ್ಪನವರು ಶರಣಧರ್ಮದ ವಿಶ್ವವಿಶಾಲ ದೃಷ್ಟಿ, ವಚನಸಾಹಿತ್ಯದ ಮಹತ್ವ, ಶರಣರ ಅನುಭಾವ ದೃಷ್ಟಿಯ ಮಹತ್ವ, ವೀರಶೈವಧರ್ಮದ ಸಾಮಾನ್ಯ ಸ್ವರೂಪ, ಬೆಳೆದು ಬಂದ ಶರಣ ಸಾಹಿತ್ಯ, ಮಠ ಮಾನ್ಯಗಳು, ಸಾಮಾಜಿಕ ಸಂಸ್ಥೆಗಳು, ಶಿವಾನುಭವ ಸಮ್ಮೇಳನಗಳು ಮುಂತಾಗಿ ವಿಶದವಾಗಿ ಪರಿಚಯಾತ್ಮಕ ಉಪನ್ಯಾಸ ನೀಡಿದರು.

ಪ್ರಥಮ ಗೋಷ್ಠಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ॥ ಜಿ .ಎಸ್. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ನಡೆದು ಶ್ರೀ. ಆ. ರಾ. ಮಿತ್ರ ಮತ್ತು ಶ್ರೀ. ಎಂ. ಎಚ್. ಕೃಷ್ಣಯ್ಯನವರು 'ಜನ ಭಾಷೆಯಾಗಿ ವಚನ ಸಾಹಿತ್ಯ' ಮತ್ತು ಹನ್ನೆ-ರಡನೇ ಶತಮಾನದ ಜನತಾ ಆಂದೋಳನ, ವಿಷಯಗಳನ್ನು ಕುರಿತು ಉಪನ್ಯಾಸ ಮಾಡಿದರು.

ಡಾ॥ ಶಿಪ್ಪೆರುದ್ರಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜರುಗಿದ ಎರಡನೆ ಗೋಷ್ಠಿಯಲ್ಲಿ ಶ್ರೀ ಮಹದೇವಬಣಕಾರ ಅವರು 'ಅನುಭವ ಮಂಟಪದ ಬೆಳಗು' ಎಂಬ ವಿಚಾರವಾಗಿಯೂ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಮಹಿಳಾ ವಿಮೋಚನೆ ಮತ್ತು ಶರಣರು, ಎಂಬ ವಿಚಾರವಾಗಿಯೂ ಉಪನ್ಯಾಸ ನೀಡಿದರು.

ಸುತ್ತೂರು ಮಠಾಧೀಶರಾದ ಪೂಜ್ಯ ಜಗದ್ಗುರು ಶಿವರಾತ್ರಿದೇಶಿಕೇಂದ್ರ ಮಹಾ ಸ್ವಾಮಿಗಳು ಸಮ್ಮೇಳನದ ಸಮಾರೋಪ ಭಾಷಣಮಾಡುತ್ತ ಶರಣ ಸಾಹಿತ್ಯ ಸಮ್ಮೇಳನಗಳು ತಾಲ್ಲೂಕು, ಹೋಬಳಿ ಮಟ್ಟಗಳಲ್ಲಿಯೂ ನಡೆಯುವಂತಾಗಿ ಶರಣತತ್ವಗಳು ಎಲ್ಲರನ್ನು ಮುಟ್ಟುವಂತಾಗಬೇಕೆಂದು ಕರೆಕೊಟ್ಟರು.

ಸಮ್ಮೇಳನ ನಡೆಯಲು ಸರ್ವಸಮರ್ಪಕವಾದ ವ್ಯವಸ್ಥೆಯನ್ನು ಮಾಡಿ ಆಶೀರ್ವಚನ ನೀಡಿದ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾ ಸ್ವಾಮಿಗಳು ಶರಣ ಸಾಹಿತ್ಯದಿಂದ ಕನ್ನಡ ಸಾಹಿತ್ಯ ಶ್ರೀಮಂತವಾಯಿತು, ಅದರ ಅಧ್ಯಯನದಿಂದ ಆಚರಣೆಯಿಂದ ಇಂದು ಜನಾಂಗ ಶ್ರೀಮಂತವಾಗಬೇಕಾಗಿದೆ ಎಂದರು. ಸಮಾರಂಭದಲ್ಲಿ ಪೂಜ್ಯ ಶ್ರೀ ನಿಜಗುಣ ಮಹಾಸ್ವಾಮಿಗಳು ಆಶೀರ್ವಚನ ನೀಡಿದರು.

ಸಮ್ಮೇಳನದಲ್ಲಿ ಮಾನ್ಯ ಶ್ರೀ ಮ. ಮಲ್ಲಪ್ಪ, ಶ್ರೀ ಬಿ. ನಂಜುಂಡಪ್ಪ, ಶ್ರೀ ಶ್ರೀ ಜಿ.ವಿ. ಶಿವಸ್ವಾಮಿ, ಶ್ರೀ ಮಹದೇವಪ್ಪ, ಮತ್ತು ಪೂಜ್ಯ ಗುರುವಿನಪುರ ಬೃಹನ್ಮಠದ ಶ್ರೀ ಶಿವಾಚಾರ್ಯಸ್ವಾಮಿಗಳವರನ್ನು ಸನ್ಮಾನಿಸಲಾಯಿತು.

ಕಾರ್ಯಕ್ರಮ ನಿರೂಪಣೆಯನ್ನು ಬೆಂಗಳೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಮಾನ್ಯ ಶ್ರೀ ಗೊ.ರು. ಚೆನ್ನಬಸಪ್ಪನವರು ಮಾಡಿಕೊಟ್ಟರು.

# ಬಸವೇಶ್ವರರು ಕಟ್ಟಿರುವ ಹೊಸ ಸಮಾಜ

ಪ್ರೊ॥ ಸಿದ್ದಣ್ಣ ಲಂಗೋಟಿ, ಸ್ಟೇಟ್ ಪ. ಪೂ. ಮಹಾವಿದ್ಯಾಲಯ ರಾಮದುರ್ಗ
ಬೆಳಗಾವಿ ಜಿಲ್ಲೆ.

ಭಾರತದ ಧಾರ್ಮಿಕ ರಂಗದ ಸಹಸ್ರಾರು ವರುಷಗಳ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದ ಬಸವೇಶ್ವರರ ಕ್ರಾಂತಿ ಬಹು ವಿನೂತನವಾದುದೂ ವೈಶಿಷ್ಟ ಪೂರ್ಣವಾದುದೂ ಆಗಿದೆ. ಸಹಸ್ರಾರು ವರುಷಗಳಿಂದ ಭಾರತದ-ವ್ಯಕ್ತಿ-ಕುಟುಂಬ-ಸಮಾಜಜೀವನವನ್ನು ತನ್ನ ತೋಳ್ತೆಕ್ಕೆಯಲ್ಲಿ ಬಂಧಿಸಿದ ವೈದಿಕ ವರ್ಣಾಶ್ರಮ, ಧರ್ಮವನ್ನು ತಿರಸ್ಕರಿಸಿ ಸರ್ವತಂತ್ರ ಸ್ವತಂತ್ರವಾದ ವಿನೂತನ ಧರ್ಮ ಸಮಾಜ ನಿರ್ಮಿಸಿದವರು ಬಸವಣ್ಣನವರು ಹಾಗೂ ಅವರ ಸಮಕಾಲೀನ ನೂರಾರುಜನ ಶರಣರು.

ಇಂದು ಹಿಂದೂ ಧರ್ಮವೆಂದು 'ಪ್ರಚಲಿತವಾಗಿರುವ ಅಂದಿನ ವೈದಿಕ ಹಾಗೂ ಶೈವಗಳ ಹಲವಾರು ಸಂಪ್ರದಾಯವಾದಿ ಮೂಢ ನಂಬಿಕೆಗಳನ್ನು ಉಗ್ರವಾಗಿ ಪ್ರತಿಭಟಿಸಿ. ತಿರಸ್ಕರಿಸಿ, ಸ್ವಾನುಭಾವದ ನೆಲೆಗಟ್ಟಿನ ಮೇಲೆ ಅರಿವು, ಆಚಾರ ಅನುಭಾವದ ತಳಹದಿಯ ಭದ್ರ ಬುನಾದಿಯ ಮೇಲೆ ಹೊಸತಾದ ಧರ್ಮ - ಸಮಾಜವನ್ನೇ ಪ್ರಾರಂಭಿಸಿದರು.

ಅಲ್ಲಿಯ ವರೆಗೂ ಜನತೆಯ ನಂಬಿಕೆಗಳಿಗೆ ಅಲುಗಾಡದಂತಹ ಕಠೋರ ಕಡಿವಾಣ ಹಾಕಿದ್ದ ವೇದಾಗಮನಗಳ ವಿಚಾರಗಳನ್ನು ಒರಗೆ ಹಚ್ಚಿದರು. ವರ್ಣ-ಆಶ್ರಮ-ವರ್ಗ-ಲಿಂಗಭೇದಗಳನ್ನು ಜರಿದರು, ತಿರಸ್ಕರಿಸಿದರು, ಕರ್ಮಸಿದ್ಧಾಂತ, ಜನ್ಮಾಂತರ,ಲೋಕಾಂತರ, ಸ್ಥಾವರ ಗುಡಿ ಗುಂಡಾರಗಳ ನಿರ್ಮಾಣ, ಬಹುದೇವೋಪಾಸನೆ, ಪಾಪಪುಣ್ಯ, ಸ್ವರ್ಗ ನರಕ, ಕೈಲಾಸ ವೈಕುಂಟ, ಇವೇ ಮುಂತಾದವುಗಳನ್ನು ತಮ್ಮ ಸ್ವಾನುಭಾವದ ವಿಚಾರ ಆಚಾರಗಳಿಂದ ಅಲ್ಲಗಳೆದರು.

12 ನೇ ಶತಮಾನದ ಸುಜ್ಞಾನಿ ಚನ್ನ ಬಸವಣ್ಣ ಹೇಳುವಂತೆ-

ಬಸವನೇ ಬಲ್ಲಾಳಾಗಿ, ಹೊಸಭಕ್ತಿ ಅಂಬಾಗಿ
ಎಸೆದೆನಯ್ಯ ಆ ಲಿಂಗವನ್ನು ಗುರಿಮಾಡಿ
ಶಿಸುವ ಬಾಣವ ಕೊಂಡು ಬಸುರ ಮಧ್ಯವ ತಾಗೆ
ಹೊಸದೆಸೆಗಳೆಲ್ಲ ಕಾಣಬಂದುವಯ್ಯ
ಭಸ್ಮ ವೆಣ್ಣೆಯ ಪೂಸಿ ಕೂಡಲ ಚನ್ನಸಂಗಯನಲ್ಲಿ
ಬಸವ ಪೂಯದ ಆರೈದ ಲಿಂಗವನು.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಅನುಭವ ಮಂಟಪವೆಂಬ ವಿನೂತನ ಸಂಸ್ಥೆ ಪ್ರಾರಂಭಿಸಿ ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಸರ್ವರಿಗೂ ಮುಕ್ತ ಅವಕಾಶ ನೀಡಿ, ಧಾರ್ಮಿಕ, ಸ್ವಾತಂತ್ರ್ಯ, ಸಮಾನತೆ, ಬಂಧುತ್ವದ ಆಧಾರದ ಮೇಲೆ ಲಿಂಗಮತ ಧರ್ಮವನ್ನು ಮಹಾನುಭಾವಿ ಬಸವೇಶ್ವರರು ಸ್ಥಾಪಿಸಿದಾಗ ಈ ಧರ್ಮವು ಎಲ್ಲರಿಗೂ ಮುಕ್ತ ಅವಕಾಶ ನೀಡಿದಾಗ ಹೊಸಭಕ್ತಿ ಪರಂಪರೆಯೇ ಪ್ರಾರಂಭವಾಯಿತು.

ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಗಮನಿಸ ಬೇಕಾದದ್ದು ಅತ್ಯವಶ್ಯವಿದೆ. ವೈದಿಕ ಪುರೋಹಿತಶಾಹಿ ತಿರಸ್ಕರಿಸಿದ ಜೈನ-ಬೌದ್ಧ ಮತಗಳ ನಿರೀಶ್ವರ ವಾದವನ್ನೇ ಅನುಸರಿಸಿದ್ದರಿಂದ ಪುರೋಹಿತಶಾಹಿ ಜನಾಂಗದ ಪ್ರತಿಭಟನೆ ಅಷ್ಟೊಂದು ಉಗ್ರವಾಗಲಿಲ್ಲ, ಆದರೆ ಬಸವಣ್ಣನವರು ಸೇಶ್ವರವಾದಿ ಧರ್ಮ ಸ್ಥಾಪಿಸಿ ಪೂಜಾರಿ-ಪುರೋಹಿತಶಾಹಿ ಗುಡಿ ಗುಂಡಾರಗಳನ್ನು, ವೇದಾಗಮ ನಿರ್ಮಿತ ಕಂದಾಚಾರಗಳನ್ನು ತಿರಸ್ಕರಿಸಿ ಹೊಸ ಧರ್ಮವನ್ನು ನೀಡಿದುದರಿಂದ ಉಗ್ರ ಪ್ರತಿಭಟನೆ ಎದುರಿಸಬೇಕಾಯಿತು.

**ವೇದಾಗಮ ಪ್ರಮಾಣ ತಿರಸ್ಕಾರ:-**

ಬಸವಣ್ಣನವರು ಹಾಗೂ ಅವರ ಸಮಕಾಲೀನ ಶರಣರು ತಮ್ಮ ಧರ್ಮ ಸಮಾಜಗಳ ಅನುಷ್ಠಾನ, ಆಚರಣೆಗೆ ವೇದಾಗಮನಗಳನ್ನು ಆಧಾರವಾಗಿಟ್ಟುಕೊಳ್ಳದೆ ಅವುಗಳನ್ನು ತಿರಸ್ಕರಿಸಿದರು.

ಅಲ್ಲಮ ಪ್ರಭುದೇವರು ಹೇಳುವಂತೆ:-

ವೇದ ಪ್ರಮಾಣವಲ್ಲ ಶಾಸ್ತ್ರ ಪ್ರಮಾಣವಲ್ಲ
ಆಗಮ ಪ್ರಮಾಣವಲ್ಲ, ಪುರಾಣ ಪ್ರಮಾಣವಲ್ಲ ಕಾಣಿಭೋ ಲಿಂಗಕ್ಕೆ
ಅಂಗಸಂಗದ ಮಧ್ಯದಲ್ಲಿದ್ದು ಟೈಚಿಟ್ಟು ಬಳಸಿದ ಗುಹೇಶ್ವರ ನಿಮ್ಮ ಶರಣ

ಮಹಾದೇವಿಯಕ್ಕ ಹೇಳುವಂತೆ:-

ವೇದಶಾಸ್ತ್ರ ಪುರಾಣಾಗ ಮಂಗಳೆಲ್ಲವು
ಕೊಟ್ಟಣವ ಕೊಚಿದ ನುಚ್ಚು ತೌಡು ಕಾಣಿಭೋ
ಇವ ಕಟ್ಟಲೇಕೆ ಕುಸುಕಲೇಕೆ
ಅತ್ತಲತ್ತ ಹರಿವ ಮನದ ಶಿರವನರಿದಡೆ
ಬಚ್ಚ ಬರಿಯ ಬಯಲು ಚೆನ್ನಮಲ್ಲಿಕಾರ್ಜುನ.



ಮಡಿವಾಳ ಮಾಚಿದೇವರು ಹೇಳುವಂತೆ:-

ವೇದ ವಿಪ್ರರ ಬೋಧೆ
ಶಾಸ್ತ್ರ ಸಂತೆಯ ಮಾತು
ಪುರಾಣ ಪುಂಡರ ಗೋಷ್ಠಿ
ಆಗಮ ಅನೃತದ ನುಡಿ
ತರ್ಕ ವ್ಯಾಕರಣರ ಕವಿತ್ವ ಪೌಂಡಿಮೆ
ಇದು ಕಾರಣ ತನೊಳಗನರಿದ ಅನುಭವದಿಂದ
ಘನವಿಲ್ಲೆಂದ ಕಲಿದೇವರ ದೇವ

ಈರೀತಿಯಾಗಿ ಬಸವಾದಿ ಶರಣರು ಗ್ರಂಥ ಪ್ರಮಾಣ ತಿರಸ್ಕರಿಸಿ ಸ್ವಾನುಭಾವವನ್ನೇ ಆಧಾರವಾಗಿಸಿಕೊಂಡು ನಡೆದಾಗ ಸಾಮಾನ್ಯ ಜನತೆಯಲ್ಲಿ ಜಾಗೃತಿ ಉಂಟುಮಾಡಿದರು. ಶರಣ ಆಧಯ್ಯನವರಂತೂ-"ವೇದಂಗಳ ಹಿಂದೆ ಹರಿಯದಿರು ಹರಿಯದಿರು, ಶಾಸ್ತ್ರಂಗಳ ಹಿಂದೆ ಸುಳಿಯದಿರು ಸುಳಿಯದಿರು, ಪುರಾಣಂಗಳ ಹಿಂದೆ ಬಳಲದಿರು ಬಳಲದಿರು, ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು, ಸೌರಾಷ್ಟ್ರಸೋಮೇಶ್ವರನ ಕೈ ಹಿಡಿದು ಶಬ್ದ ಜಾಲಂಗಳಿಗೆ ಬಳಲದಿರು ಬಳಲದಿರು, ಎಂದು ಎಚ್ಚರಿಸುತ್ತಾರೆ. ಸ್ವತಃ ಹೊಸ ಧರ್ಮ ಸಮಾಜಗಳ ರೂವಾರಿ ಬಸವಣ್ಣನವರೂ ಕೂಡ-"ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ ಆಗಮದ ಮೂಗ ಕೊಯ್ಯುವೆ ನೋಡಯ್ಯ" ಎಂದು ಹೇಳಿದ್ದಲ್ಲದೇ ಇವುಗಳ ಹೆಸರಿನಲ್ಲಿ ಪುರೋಹಿತಶಾಹಿ ಜನಮಾಡುವ ಯಜ್ಞ-ಯಾಗ ಹೋಮಹವನ ಮುಂತಾದ ಕರ್ಮಠ ಆಚರಣೆಯನ್ನು ಖಂಡಿಸುತ್ತಾರೆ.

ಸ್ವತಃ ಬ್ರಾಹ್ಮಣ ಕುಲವಲ್ಲಿ ಹುಟ್ಟಿದ ಬಸವಣ್ಣನವರು ಅಂದಿನ ಕಾಲದ ಕರ್ಮಠ ಸಂಪ್ರದಾಯದ ರೀತಿ, ನೀತಿ, ಶೋಷಣೆ ಕಂಡು ಮನನೊಂದು, ಜಿಗುಪ್ಸೆತಾಳಿ ಕರ್ಮಲತೆಯಂತಿರ್ದ ಜನಿವಾರವ ಕಿತ್ತು ಬಿಸುಟು "ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯಾ" ಎಂದು ತಮ್ಮ ಜನ್ಮದ ಮೇಲರಿಮೆಯನ್ನು ನಿರಸನ ಮಾಡಿಕೊಂಡು ಇದೇ ಮನುಕುಲದ ಲೇಸಿಗಾಗಿ ಅದರಲ್ಲಿಯೂ ಶೂದ್ರ-ಅಸ್ಪೃಶ್ಯ ದೀನ-ದಲಿತ ಜನಾಂಗಗಳ ಉದ್ಧಾರಕ್ಕಾಗಿ ನವ ಧರ್ಮ-ಸಿದ್ಧಾಂತ-ಸಮಾಜ-ಸಂಸ್ಕೃತಿಯನ್ನೇ ರೂಪಿಸುತ್ತಾರೆ.

**ಇಷ್ಟಲಿಂಗದ ಮೂಲಕ ಬಹುದೇವೋಪಾಸನೆ ತಿರಸ್ಕರಿಸಿದ್ದು**

ವರ್ಣಾಶ್ರಮ ಧರ್ಮ ವ್ಯವಸ್ಥೆಯಲ್ಲಿ ಬಹುಜನ ಸಮಾಜದ ಶೂದ್ರರಿಗೆ ದೇವಾಲಯ ಪ್ರವೇಶವಿರಲಿಲ್ಲ ಶೂದ್ರರಿಗೆ ಹಾಗೂ ಸ್ತ್ರೀಯರಿಗೆ ಧಾರ್ಮಿಕ ಸಂಸ್ಕಾರವಿರಲಿಲ್ಲ. ದೇವೋಪಾಸನೆಗೆ ಸ್ವಾತಂತ್ರ್ಯವಿರಲಿಲ್ಲ ವೈದಿಕ ಪುರೋಹಿತಶಾಹಿಯು ಬಹುದೇ

ವೋಪಾಸನೆಯನ್ನು ಬೆಳೆಸಿದುದರಿಂದಾಗಿ ಎಲ್ಲೆಡೆಯಲ್ಲಿಯೂ ಕಾಲಿಡಲಬಿಂಲ್ಲದಷ್ಟು ಕ್ಷುದ್ರಾತಿಕ್ಷುದ್ರ ದೇವಾನುದೇವತೆಗಳು, ನೂರಾರು ಮೂರ್ತಿಗಳು ಅವುಗಳ ಹೆಸರಿನಲ್ಲಿ ಯಜ್ಞ-ಯಾಗಗಳು ಅಭಿಷೇಕ-ಪೂಜೆ ಪುನಸ್ಕಾರಗಳು, ಭಾರತೀಯ ಜಾತಿ ವ್ಯವಸ್ಥೆಯ ಧರ್ಮ-ದೇವರು ಎಂಬ ಪರಿಕಲ್ಪನೆಯ ಕೆಸರಿನಲ್ಲಿ ಆಳವಾಗಿ ಬೇರು ಬಿಟ್ಟಿರುವುದನ್ನು ಮನಗಂಡ ಬಸವಣ್ಣನವರು ಈ ಪುರೋಹಿತಶಾಹಿ ಧರ್ಮ ದೇವರುಗಳ ವ್ಯವಸ್ಥೆಯನ್ನೇ ಬುಡಸಹಿತವಾಗಿ ತಗೆವ ಸಲುವಾಗಿ – "ಇಷ್ಟಲಿಂಗ" ಎಂಬ ನೂತನ ದೇವಕಲ್ಪನೆ (Concept of God) ಯನ್ನೇ ಕಂಡುಹಿಡಿದರು ತನ್ನ ಸ್ವಸ್ವರೂಪದ ಕುರುಹಾಗಿ ವಿಶ್ವವಾಕಾರದಲ್ಲಿ ಚುಳುಕಾಗಿರುವ ನಿರಾಕಾರ ಚೇತನದ ಸಕಾರವಾಗಿ "ಇಷ್ಟಲಿಂಗ" ವನ್ನು ರೂಪಿಸಿ, ಅದನ್ನು ವರ್ಗ ವರ್ಣ ಆಶ್ರಮ ಲಿಂಗಭೇದವೆನ್ನದೇ ಸರ್ವರಿಗೂ ಧರ್ಮಸಂಸ್ಕಾರ ಮೂಲಕ ನೀಡಿದರು.

ಇದರಿಂದಾಗಿ ಭಕ್ತ-ದೇವರ ಮಧ್ಯೆ ಪೂಜಾರಿ-ಪುರೋಹಿತರೆಂಬ ದಲ್ಲಾಳಿಗಳು ಮಾಡುತ್ತಿದ್ದ ಶೋಷಣೆ ತಪ್ಪಿತು. ಪ್ರತಿಯೊಬ್ಬ ವ್ಯಕ್ತಿಯ ದೇಹವೇ ದೇವಾಲಯ ವಾಯ್ತು, ಒಳಗಣ ಚೈತನ್ಯದ ಸಾಕಾರವೇ ಇಷ್ಟಲಿಂಗವಾಗಿ ಅಹಂಗ್ರಹೋಪಾ-ಸನೆಗಾಗಿ ಕರಸ್ಥಲಕ್ಕೆ ಚುಳುಕಾಗಿ ಬಂದಿತು ಅದುವೇ ತನು-ಮನ-ಭಾವಗಳಲ್ಲಿ ಇಷ್ಟ-ಪ್ರಾಣ-ಭಾವಲಿಂಗಗಳೆಂಬ ಸಂಬಂಧದಿಂದ ಸಮರಸದ ಮಾರ್ಗವಾಯಿತು.

**ಜಾತ್ಯಾತೀತ ಸಮಾಜ ರಚನೆ:—**

ಅರಿವು–ಆಚಾರ–ಅನುಭಾವದ ಮೂಲಕ ಸಮಾನತೆಯ ಧರ್ಮಸಂಸ್ಕಾರ ಪ್ರಾರಂಭವಾದ್ದರಿಂದ ವರ್ಣಾಶ್ರಮಕ್ಕತೀತವಾದ ಜಾತ್ಯಾತೀತ ಸಮಾಜ ರಚನೆಗೆ ಅವಕಾಶವೊದಗಿತು. ಬ್ರಾಹ್ಮಣ–ಕ್ಷತ್ರಿಯ–ವೈಶ್ಯ-ಶೂದ್ರ ಎಂಬ ಚಾತುರ್ವರ್ಣ ವ್ಯವಸ್ಥೆಯನ್ನು ಬಸವಣ್ಣನವರು ತಿರಸ್ಕರಿಸಿ ವಿಪ್ರಮೊದಲು ಅಂತ್ಯಜ ಕಡೆಯಾಗಿ ಲಿಂಗಭಕ್ತರನ್ನೆಲ್ಲ ಒಂದೇ ಎಂದು ಸಾರಿದರು.

ಹುಟ್ಟಿನಿಂದ ಯಾರು ಮೇಲಲ್ಲ, ಯಾರು ಕೀಳಲ್ಲ ಎಲ್ಲ ಮಾನವರೂ ಒಂದೇ ಎಂದು ತಿಳಿಸುತ್ತ.

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ,
ಜಲಬಿಂದುವಿನ ವ್ಯವಹಾರ ಒಂದೇ
ಆಸೆ, ಆಮಿಷ, ರೋಷ, ಹರುಷ, ವಿಷಯಾದಿಗಳೆಲ್ಲ ಒಂದೇ
ಏನನೋದಿ–ಏನಕೇಳಿ, ಏನುಫಲ?
ಕುಲಜನೆಂಬುದಕ್ಕೆ ಆವುದು ದ್ರುಷ್ಟ?
ಸಪ್ತಧಾತು ಸಮಃ ಪಿಂಡಃ ಸಮಯೋನಿ ಸಮುದ್ಭವಂ
ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂಪ್ರಯೋಜನಂ?



ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ
ಆಸಿ ಸಾಲಿಗನಾದ, ವೇದವನ್ನೋದಿ ಹಾಸನಿಕ್ಕಿ ಹಾರವನಾದ
ಕರ್ಣದಲಿ ಜನಿಸಿದವರುಂಟೆ ಜಗದೊಳಗೆ?
ಇದು ಕಾರಣ ಕೂಡಲ ಸಂಗಮದೇವ
ಲಿಂಗಸ್ಥಳವನರಿದವನೆ ಕುಲಜನು

ಎಂದು ಸಾರಿದರು. ಹುಟ್ಟಿನ ಕುಲದ ಬಗ್ಗೆ ಹೆಮ್ಮೆಪಡುತ್ತಿದ್ದ ಮೇಲ್ಜಾತಿಯವರನ್ನು ಅವರ ಮೇಲರಿಮೆಯ ನಾಶಕ್ಕಾಗಿ ಅವರ ಮೂಲಗೋತ್ರ ಪುರುಷರ ಹುಟ್ಟಿನ ಕುಲವನ್ನು ಎತ್ತಿ ತೋರಿಸಿದರು. ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಅಗಸ್ತ್ಯ, ಕಬ್ಬಿಲ, ದೂರ್ವಾಸ ಮಚ್ಚಿಗ, ಕಶ್ಯಪ ಕಂಬಾರ, ಕೌಂಡಿಣ್ಯನಾಯಿಂದ _____ ಹೀಗೆ ಇರುವಾಗ ಕುಲ ಕುಲ ಎಂದು ಯಾಕೆ ಬಡಿ-ದಾಡುವಿರಿ? ಎಂದು ನಿಷ್ಠುರವಾಗಿ ಹೇಳುತ್ತಾರೆ.

ಇದಲ್ಲದೆ ನೆಲ–ನೆಲದಲ್ಲಿ ಜಲ, ಜಲದಲ್ಲಿ ಇದ್ದ ಮೇಲು ಕೀಳು ಭಾವನೆಯನ್ನು ಕೂಡ ದೂರೀಕರಿಸುತ್ತಾರೆ.

ನೆಲನೊಂದೆ, ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನರಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ ಕೂಡಲಸಂಗಮದೇವ ನಿಮ್ಮನರಿದವರಿಗೆ

ಈರೀತಿಯಾಗಿ 10, 18 ಕುಲಗಳ ಗೊಂದಲಗಳನ್ನೇ ತಿರಸ್ಕರಿಸಿ ಮನುಕುಲವೊಂದು, ಮಾನವರೆಲ್ಲ ಶಿವನ ಮಕ್ಕಳು, ಎಲ್ಲರೂ, ಅಣ್ಣತಮ್ಮಂದಿರೆಂಬ ಸಮಾಜ ರಚನೆ ಮಾಡಿದರು.

**ಮಾನವತೆಯ ಮಹಾಸಿದ್ಧಿ ಶರಣರದು:-**

ವರ್ಗ, ವರ್ಣ, ಆಶ್ರಮ, ಲಿಂಗ, ಭೇದ, ರಹಿತ ಧರ್ಮ, ಸಮಾಜರಚನೆ ಯಾದುದರಿಂದ ಮಾದಾರಚನ್ನಯ್ಯ, ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ ಹೊಲೆಯರ ಶಿವನಾಗಮಯ್ಯ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಬಾಚಿ ಕಾಯಕದ ಬಸವಪ್ಪ, ಉರಿಲಿಂಗಪೆದ್ದಿ, ಕಾಳವ್ವೆ, ಆಯ್ದಕ್ಕಿ ಮಾರಯ್ಯ ಲಕ್ಕಮ್ಮ, ಅಡಪ್ಪದ ಅಪ್ಪಣ್ಣ ಲಿಂಗಮ್ಮ, ಮೋಳಿಗೆಯ ಮಾರಯ್ಯ ಮಹಾದೇವಮ್ಮ, ಅಲ್ಲಮಪ್ರಭುದೇವ, ಸಿದ್ಧರಾಮ, ಸತ್ಯಕ್ಕ, ಲಿಂಗಮ್ಮ, ಮುಕ್ತಾಯಕ್ಕ, ರಾಯಮ್ಮ,

ಸೋಳೆಸಂಕ್ಕವ್ವೆ, ಬೋಂತಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಅಕ್ಕನಾಗಮ್ಮ, ಚನ್ನಬಸವಣ್ಣ, ಒಕ್ಕಲಿಗ ಮುದ್ದಣ್ಣ, ಕುರುಬ ಗೊಲ್ಲಾಳ, ಜೇಡರ ದಾಸಿಮಯ್ಯ ಮಗ್ಗಳೆ, ಶಂಕರದಾಸಿಮಯ್ಯ, ಡಕ್ಕೆಯ ಮಾರಯ್ಯ, ದಸರಯ್ಯ, ಅಜಗಣ್ಣ ಮುಂತಾದ ಸಾವಿರಾರು ಜನ ಅನುಭವ ಮಂಟಪದಲ್ಲಿ ಸೇರಿದರು. ಕಲ್ಯಾಣದಲ್ಲಿ ಕಾಯಕ ಮಾಡುತ್ತ, ದಾಸೋಹ ನಡೆಸುತ್ತ, ಅನುಭಾವಿಗಳಿಗಾಗಿ ವಚನ ರಚನೆ ಗೈಯುತ್ತಾ ಶರಣ ಸಮಾಜವನ್ನು ಆದರ್ಶವಾಗಿ ರೂಪಿಸುವರು. ಬಸವಣ್ಣನವರು ಬೋಧಿಸಿದ ತತ್ವವನ್ನು ಕೇವಲ ಮಾತಿನಲ್ಲಿ ಅಲ್ಲ ಕೃತಿಯಲ್ಲಿಯೂ ತಂದರು. ಈ ಕುರಿತು ಮೋಳಿಗೆಯ ಮಾರಯ್ಯನವರ ವಚನ ಹೀಗಿದೆ.

ಅಗ್ರಜ ಅಂತ್ಯಜ ವರ್ಣಧರ್ಮದ ಎರಡು ಧ್ರುವಗಳು
ಒಂದು ಉತ್ತರ, ಇನ್ನೊಂದು ದಕ್ಷಿಣ, ನಡುವೆ ಒಂದು ದೊಡ್ಡ ಕಮರಿ
ಅನುರಾಗದ ಗಾಳಿಬೀಸಿ ಭಕ್ತಿ ಸೂತ್ರ ಬಂಧಿಸಿತ್ತು ಎರಡನ್ನು
ಅಗ್ರಜನ ಪುತ್ರಿ ಅಂತ್ಯಜನ ಮಗನ ಕೈಹಿಡಿದಳು.
ಸಾಧಿಸಿತು ಮಾನವತೆಯ ಮಹಾಸಿದ್ಧಿ ಶರಣರಲ್ಲಿ
ನಿಃಕಳಂಕ ಮಲ್ಲಿಕಾರ್ಜುನ ನೋಡಿ ಬೆರಗಾದೆ ನಾನು.

12ನೆಯ ಶತಮಾನದಲ್ಲಿ ಅದು ಇಂದಿಗೆ 857 ವರುಷಗಳ ಹಿಂದೆ ಬಸವಾದಿ ಶರಣರು ಇಂತಹ ಜಾತ್ಯಾತೀತ ಸಮಾಜ-ಧರ್ಮ, ಸ್ಥಾಪಿಸಿ ಮಹಾಸಿದ್ಧಿ ಸಾಧಿಸಿದರು.

### ಆರ್ಥಿಕ ಸಮಾನತೆಯ ಸಮಾಜ ಶರಣರದು

ಬಸವಣ್ಣನವರು ನಿರ್ಮಿಸಿದ ಸಮಾಜ ಆರ್ಥಿಕ ಸಮಾನತೆಯ ಸಮಾಜವಾಗಿತ್ತು. ಕಾಯಕ-ದಾಸೋಹ-ಪ್ರಸಾದ, ಈ ಮೂರು ತತ್ವ ಸಿದ್ಧಾಂತಗಳಲ್ಲಿ ಅವರ ಆರ್ಥಿಕ ಕ್ರಾಂತಿಯು ಮಹತ್ವವಾಗಿದೆ. ಇದರಿಂದಾಗಿ ಅಂದಿನ ಸಮಾಜದಲ್ಲಿ "ಕಲ್ಯಾಣ ಪಟ್ಟಣದಲ್ಲಿ ನೀಡುವವರುಂಟು, ಬೇಡುವವರಿಲ್ಲ, ಬೇಡುವವರಿಲ್ಲದ ಕಾರಣ ಬಡವನಾದೆನಯ್ಯ". ಎಂಬಂತಹ ಸ್ವಾವಲಂಬನೆಯ ಕಾಯಕ ಸಮಾಜ ನಿರ್ಮಾಣಗೊಂಡಿತ್ತು. ಕಾಯಕ ಎಂದರೆ ಕೆಲಸ, ಕಾಯಕವೆಂದರೆ ಸತ್ಯ ಶುದ್ಧವಾದ ದುಡಿಮೆ ಅಂತಪ್ಪ ಕಾಯಕವೇ ಕೈಲಾಸ,

ಬಸವಣ್ಣನವರು ಕಾಯಕ ಸಿದ್ಧಾಂತದ ಮೂಲಕ ಅದ್ಭುತವಾದ ಆರ್ಥಿಕ ಕ್ರಾಂತಿಯನ್ನೇ ಮಾಡಿದರು. ನೂರಾರು ಕಾಯಕ ಯೋಜನೆಗಳನ್ನು ರೂಪಿಸಿದರು. ಚಮ್ಮಾರನ ಕಾಯಕದ ಪವಿತ್ರ ಪ್ರಧಾನಿಕ ಕಾಯಕ ಎಂದು ಆಚರಿಸಿ ತೋರಿಸಿದರು. ಇದರಿಂದಾಗಿ ಕಾಯಕ ಗೌರವ (Dignity of Labour) ಅಷ್ಟೇ ಅಲ್ಲ ಕಾಯಕ ದೇವತ್ವ (Divinity of Labour) ಕೂಡ ಎಂದು ಸಾಧಿಸಿದರು.



ಕೃತ್ಯಕಾಯಕ ವಿಲ್ಲದವರು ಭಕ್ತರಲ್ಲ
ಸತ್ಯ ಶುದ್ಧವಿಲ್ಲದುದು ಕಾಯಕವಲ್ಲ
ಎಂದು ಉರಿಲಿಂಗ ಪೆದ್ದಯ್ಯಗಳ ಪುಣ್ಯಸ್ತ್ರೀ
ಕಾಳವ್ವೆ ಶರಣೆ ನುಡಿದು ಆಚರಿಸಿದರೆ
ಗುರುವಾದರು ಕಾಯಕದಿಂದಲೇ ಜೀವನ್ಮುಕ್ತಿ
ಲಿಂಗವಾದರು ಕಾಯಕದಿಂದಲೇ ಶಿಲೆಯ ಕುರುಹು ಅಳಿವುದು
ಜಂಗಮವಾದರು ಕಾಯಕದಿಂದಲೇ ವೇಶದಪಾಶ ಹರಿವುದು
ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗದ ಅರಿವು
ಎಂದು ನುಲಿಯ ಚಂದಯ್ಯ ತಿಳಿಯ ಪಡಿಸುತ್ತಾರೆ.

ಆಯ್ದಕ್ಕಿ ಮಾರಯ್ಯ ಶರಣರಂತು ಕಾಯಕದಲ್ಲಿ ನಿರತನಾದರೆ ಗುರುದರ್ಶನ, ಲಿಂಗಪೂಜೆ, ಜಂಗಮದರ್ಶನ ಮರೆಯಬೇಕು ಎನ್ನುತ್ತಾರೆ. ಯಾಕೆಂದರೆ ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾದರೂ ಕಾಯಕ ದೊಳಗೂ ಎಂದು ತಿಳಿಸುತ್ತಾರೆ.

ಕಾಯಕದಲ್ಲಿ ತನು ಮನ ಬಳಲಬೇಕು ಅಂದರೆ ಮಾತ್ರ ಅದು ಪರಿಶುದ್ಧ. ಸತ್ಯ ಶುದ್ಧ ಕಾಯಕ ಮಾಡದೆ ಉದ್ದಂಡ ವೃತ್ತಿಯಲ್ಲಿ ಧನಗಳಿಸ ಬಾರದು ಎಂದು ಶರಣರು ಎಚ್ಚರಿಸುತ್ತಾರೆ. ಸತ್ಯ ಶುದ್ಧ ಕಾಯಕದಿಂದಗಳಿಸಿ, ಗಳಿಸಿದ್ದನ್ನು, ದಾಸೋಹಂಭಾವದಿಂದ ಸಮಾಜರೂಪಿ ಜಂಗಮಕ್ಕೆ ಬಳಸಬೇಕು. ಸಂತೃಪ್ತಿಯ ಪ್ರಸಾದ ಸ್ವೀಕರಿಸಬೇಕು ಕೇವಲಗಳಿಕೆ ಬಳಕೆ, ಅಷ್ಟೇ ಸಾಲದು ಅದು ಸಂತೃಪ್ತಿಯಾಗಬೇಕು. ಈ ಕಾಯಕ ತತ್ವದ ಆಚರಣೆಯಿಂದಾಗಿ ಅಂದಿನ ಬಸವ ಸಮಾಜದಲ್ಲಿ ನಿರುದ್ಯೋಗ ಸಮಸ್ಯೆಯ ಇದ್ದಿರಲಿಲ್ಲವೆನ್ನಬಹುದು.

### ಶಿಕ್ಷಣ ಕ್ರಾಂತಿಯ ಸಮಾಜ ರಚನೆ:-

ವಿದ್ಯಾಭ್ಯಾಸ ಕೇವಲ ವಿಪ್ರವರ್ಗಕ್ಕೆ ಸೀಮಿತವಾಗಿದ್ದ ಕಾಲದಲ್ಲಿ ಬಸವಣ್ಣನವರು ಸರ್ವರಿಗೂ ಮಾತೃಭಾಷೆ ಕನ್ನಡದಲ್ಲಿ ವಿದ್ಯಾಭ್ಯಾಸಕ್ಕೆ ಅವಕಾಶ ಕಲ್ಪಿಸಿದರು. ಇದರಿಂದಾಗಿ ನೂರಾರುಜನ ಕಾಯಕಷ್ಟ ಮಾಡಿ ಬದುಕುವವರು ಶರಣರಾಗಿ ವಚನ ರಚನೆ ಮಾಡಿರುವುದು ತಿಳಿದು ಬರುತ್ತದೆ.

### ಸ್ತ್ರೀ-ಪುರುಷ ಸಮಾನತೆಯ ಸಮಾಜ:-

ಬಸವಣ್ಣನವರು ಕಟ್ಟಿದ್ದ ಹೊಸ ಸಮಾಜದಲ್ಲಿ ಸ್ತ್ರೀ ಪುರುಷ ಎಂಬ ಭೇದ-ಭಾವ ವಿರಲಿಲ್ಲ.

ಮೊಲೆ ಮೂಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ಕಾಣಾ ರಾಮನಾಥಾ.

ಎಂದು ಜೇಡರ ದಾಸಿಮಯ್ಯನವರು ಸಾರಿದಂತೆ, ಸರ್ವರಿಗೂ ಸಮಾನ ಅವಕಾಶ ಸಮಾನ ಗೌರವಗಳಿದ್ದವು. ಧಾರ್ಮಿಕವಾಗಿ, ಸಮಾಜಿಕವಾಗಿ, ಆಧ್ಯಾತ್ಮಿಕವಾಗಿ ಪುರುಷನಷ್ಟೇ ಸ್ತ್ರೀಗೂ ಕೂಡ ಸ್ವಾತಂತ್ರ್ಯವಿತ್ತು. ಧಾರ್ಮಿಕ ಸ್ವಾತಂತ್ರ್ಯದ ಅವಕಾಶ ಕಲ್ಪಿಸಿದಾಗ ನೂರಾರು ಸಾವಿರಾರು ಸ್ತ್ರೀಯರು ತಮ್ಮ ಸ್ವ-ಸಾಮರ್ಥ್ಯದ ಬಲದಿಂದ ಪುರುಷರಿಗಿಂತ ಮಿಗಿಲೆನಿಸುವ ರೀತಿಯಲ್ಲಿ ಸಾಧನೆ ಸಾಧಿಸಿದರು, ಸ್ತ್ರೀ-ಮಾಯೆ, ಮಲ, ಭಾಂಡ ಎಂದು ಹೀಯಾಳಿಸುತ್ತಿದ್ದ ಮಾಯಾವಾದಿಗಳ ಅಜ್ಞಾನವನ್ನು ತೊಡೆದು ಸ್ತ್ರೀ-ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಮನಗಾಣಿಸಿದರು.

ಅಕ್ಕಮಹಾದೇವಿ, ಅಕ್ಕನಾಗಮ್ಮ, ನೀಲಮ್ಮ, ಗಂಗಮ್ಮ, ಮುಕ್ತಾಯಕ್ಕ, ಲಕ್ಕಮ್ಮ ಲಿಂಗಮ್ಮ, ಸತ್ಯಕ್ಕ, ರಾಯಮ್ಮ, ಮಸಣಮ್ಮ, ಸಂಕವ್ವ, ಕಾಳವ್ವೆ ಬೊಂತಾದೇವಿ ಮುಂತಾದ 35 ಮೇಲ್ಪಟ್ಟ ಜನ ಸ್ತ್ರೀಯರು. ವಚನಕಾರ್ತಿಯರಾಗಿ ವಚನ ರಚನೆ ಮಾಡಿದದು ತಿಳಿದು ಬರುತ್ತಿದೆ. ಸ್ತ್ರೀ ಕೇವಲ ಸತಿಯಾಗಿ ಮಾತ್ರವಲ್ಲ ಅವಳು ಗುರು-ಜಂಗಮವಾಗಿ ಮಠಾಧಿಕಾರಿಣಿಯಾಗಿಯೂ ಕಾರ್ಯ ನಿರ್ವಹಿಸಿರುವುದು ತಿಳಿದುಬರುತ್ತದೆ. ಇಂತಹ ಸ್ತ್ರೀ-ಪುರುಷ ಸಮಾನತೆಯ ಸರ್ವಾಂಗ ಸುಂದರ ಸಮಾಜ ರಚನೆ ಬಸವಣ್ಣನವರು ಮಾಡಿದ್ದರು.

ಎಂಟು ನೂರು ವರುಷಗಳ ಹಿಂದೆ ವರ್ಣಭೇದ ವಿಲ್ಲದೆ, ಆಶ್ರಮಭೇದವಿಲ್ಲದೆ, ವರ್ಗಭೇದವಿಲ್ಲದೆ, ಲಿಂಗಭೇದವಿಲ್ಲದೆ, ಶೋಷಣೆಯಿಲ್ಲದೆ, ಸರ್ವಾಂಗ ಸುಂದರ ಧರ್ಮಸಮಾಜವನ್ನು ನಿರ್ಮಿಸಿದ ಬಸವಣ್ಣನವರು ಸರ್ವರಂಗಗಳಲ್ಲಿಯೂ ಸಮತೆ,-ಸ್ವಾತಂತ್ರ್ಯ-ಬಂಧುತ್ವಗಳ ಮಧುರ ಸಂಬಂಧವನ್ನು ಕಲ್ಪಿಸಿದರು. ಅಖಂಡ 36 ವರುಷಗಳ ಕಾಲ ಇಂತಹ ಸಮಾಜ ರಚನೆಗಾಗಿ ಪರಿಶ್ರಮಿಸಿದರು. ವಚನಕಾರ ಸಿದ್ಧರಾಮೇಶ್ವರರು ತಿಳಿಸುವಂತೆ.

ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದೆಡೆ
ಮರ್ತ್ಯಲೋಕವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತ್ತು
ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರೂ ನಿಜಲಿಂಗ ಪದವಂ ಪಡೆದರು
ಆ ಗೃಹವ ನೋಡಬೇಕೆಂದು ನಾನು ಹಲವು ಕಾಲತಪಸಿದ್ದೆನು
ಕಪಿಲಸಿದ್ಧ ಮಲ್ಲಿನಾಥಾ ನಿಮ್ಮ ಶರಣ ಸಂಗನ ಬಸವಣ್ಣನ
ಮಹಾಮನೆಗೆ ನಮೋ ನಮೋ ಎಂದು ಬದುಕಿದೆನು.

ಸಿದ್ಧಗಂಗಾ



**ಕಲ್ಯಾಣ ಕ್ರಾಂತಿಯ ನಂತರ:**

ಬಸವಣ್ಣನವರ ವಿನೂತನ ಧರ್ಮ :- ಸಮಾಜದಲ್ಲಿ ಸೇರ್ಪಡೆಯಾದ ಬ್ರಾಹ್ಮಣರ ಮಧುವರಸ ಹಾಗೂ ಸಮಗಾರ ಹರಳಯ್ಯ ಇವರುಗಳು ಭಕ್ತಿ ಸಂಬಂಧ ದೃಷ್ಟಿಯಿಂದ ತಾವಿಬ್ಬರೂ ಲಿಂಗವಂತರೆಂದೂ ಮೇಲು-ಕೀಳು ಅಳಿದರೆಂದು ಸಾಧಿಸಿ ತೋರಿಸಿದರು. ಮಧುವರಸರ ಮಗಳು ನೀಲ, ಹರಳಯ್ಯನವರ ಮಗ ಶೀಲವಂತನೊಂದಿಗೆ ಲಗ್ನವಾದಾಗ.ಬಸವಾದಿ ಶರಣರು ಸಂತಸಪಟ್ಟರೆ. ವರ್ಣವಾದಿ-ಪುರೋ-ಹಿತಶಾಹಿ ಜನರು ಇವನ್ನು ವರ್ಣ ಸಂಕರವೆಂದು ಹುಯಿಲೆಬ್ಬಿಸಿ ಬಿಜ್ಜಳರಾಜನ ಕಿವಿಯೂದಿ ಗಲಾಟೆ ಎಬ್ಬಿಸಿದರು. ಕೊನೆಗೆ ಅಂದಿನ ರಾಜಕೀಯ ಸ್ವಾರ್ಥದಿಂದಾಗಿ ತನ್ನ ದಾಯಾದಿಗಳಿಂದಲೇ ಬಿಜ್ಜಳ ಕೊಲೆಯಾದರೂ ಅದರ ಆರೋಪ ಶರಣರ ಮೇಲೆ ಬಂದು ಪಟ್ಟಭದ್ರ ಜನ ಸೈನಿಕರ ಮೂಲಕ ಶರಣರ ಕಗ್ಗೊಲೆ, ಹರಳಯ್ಯ-ಮಧುವರಸರಿಗೆ ಎಳೆಹೂಟೆ ಶಿಕ್ಷೆನೀಡುತ್ತಾರೆ. ಕಲ್ಯಾಣದಲ್ಲಿ ಕ್ರಾಂತಿಜರುಗಿ ಸಹಸ್ರಾರು ಶರಣರು ಚದುರಿ ಹೋಗುತ್ತಾರೆ.

ಅಕ್ಕನಾಗಮ್ಮ-ಚನ್ನಬಸವಣ್ಣನವರ ನೇತೃತ್ವದಲ್ಲಿ ಶರಣರು ವಚನ ಸಾಹಿತ್ಯ ಕಾಪಾಡಿಕೊಂಡು ಉಳವಿಯ ಅಭಯಾರಣ್ಯದಲ್ಲಿ ನೆಲೆಯೂರಿ ನಿಲ್ಲುತ್ತಾರೆ. ಕೊನೆಗೆ ಅಲ್ಲಿಯೇ ಮಹಾಬಯಲಿನಲ್ಲಿ ಬಯಲಾಗುತ್ತಾರೆ.

ಬಸವಣ್ಣನವರು ಕಟ್ಟಿದ ಜಾತ್ಯತೀತ ಧರ್ಮ-ಸಮಾಜ ಈ ಎಂಟುನೂರು ವರುಷಗಳಲ್ಲಿ ನೂರಾರು ಪಂಗಡಗಳಲ್ಲಿ ಒಡೆದು-ಹೋಳಾಗಿರುವುದನ್ನು ಕಾಣುತ್ತೇವೆ. ಸ್ವಾರ್ಥ-ಸಮಯಸಾಧಕ ಪುರೋಹಿತಶಾಹಿತ್ವ ಮತ್ತೆ ಈ ಸಮಾಜದಲ್ಲಿ ಬೆಳೆಯುತ್ತಿದೆ. ಆದಾಗ್ಯೂ ಬಸವಧರ್ಮಾಭಿಮಾನಿಗಳು ಬಸವತತ್ತ್ವಾನುಯಾಯಿಗಳೂ ಈ ವಿನೂತನ ಮೌಲ್ಯಗಳ ಆಧಾರದ ಮೇಲೆ ಮತ್ತೆ ಹೊಸದಾಗಿ ಚಿಂತನೆ ನಡೆಸಿದುದು ಆಶಾದಾ-ಯಕವಾಗಿದೆ. ಚನ್ನಬಸವಣ್ಣನವರ ಭರವಸೆ ಬೆಂಗಾವಲಾಗಿದೆ.

ಭೂಮಿಯೊಳಗೆ ಬೀಜ ಬಿದ್ದಲ್ಲಿ ಕೆಟ್ಟಿತ್ತೆನ್ನಬೇಡ,
ಮುಂದಣ ಫಲದೊಳಗರಸಿಕೋ
ಕಾಸಿಕರಗಿಸಿದ ಬಂಗಾರ ಕೆಟ್ಟಿತ್ತೆನ್ನಬೇಡ
ಮುಂದಣ ಬಣ್ಣದೊಳಗರಸಿಕೊ
ಹೊತ್ತಿಸಿದ ದೀಪ್ತಿ ಕೆಟ್ಟಿತ್ತೆನ್ನಬೇಡ
ಮುಂದಣ ಅಗ್ನಿಯೊಳಗರಸಿಕೊ

ಎಂಟುನೂರು ವರುಷಗಳ ಹಿಂದೆ ಆಗಿ ಹೋದ ಶರಣರ ಕ್ರಾಂತಿ ಅಳಿದು ಹೋಗಿಲ್ಲ. ಅದು ಭೂಮಿಯಲ್ಲಿ ಬಿತ್ತಿದ ಬೀಜ, ಕಾಸಿ ಕರಗಿಸಿದ ಬಂಗಾರ, ಹೊತ್ತಿಸಿದ ದೀಪ್ತಿಯಾಗಿದೆ. ಆ ಕ್ರಾಂತಿಯ ಬಸವ ಜ್ಯೋತಿ ಪ್ರಕಾಶದಲ್ಲಿ, ಬಸವ ಬೆಳಗಿನಲ್ಲಿ ಇಂದು ವಿಶ್ವವೇ ತನ್ನ ಬಾಳಬಟ್ಟೆ ಕ್ರಮಿಸಬೇಕಾಗಿದೆ.

## ಶಿವಶರಣರ ವಚನಗಳ ಉಗಮ ಭಾಗ-೫

ಎನ್. ಚನ್ನಬಸಪ್ಪ ಗಮಕಿ. ೫೪೩, ೫ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಮಹಾಲಕ್ಷ್ಮಿ ಲೇಔಟ್,
ಬೆಂಗಳೂರು-೫೬೦೦೮೬,

ಅನುಭವ ಮಂಟಪದಲ್ಲಿ ವಿಚಾರ ಗೋಷ್ಠಿಯು ಮುಂದುವರಿಯುತ್ತಿತ್ತು. ಪಡಿಹಾರಿ ಮುತ್ತಣ್ಣನು ಮೇಲೆದ್ದು ಪ್ರಶ್ನೆ ಕೇಳಿದ:

ನೈತಿಕ ನಿಯಮಗಳ ಹಿನ್ನೆಲೆಯಲ್ಲಿ ಸಾಧನೆ ನಡೆಯ ಬೇಕೆಂಬ ಮಾತು ಬಂದಿತು. ಈ ನೀತಿಯ ನಿಯಮಗಳೆಲ್ಲಾ ಹಿನ್ನೆಲೆಯಾದರೆ ಸಾಧನೆ ಯಾವುದು ? ಅದರ ಆರಂಭ ಹೇಗೆ ?

ಆಗ ಬಸವಣ್ಣನವರು ಆತನ ಪಶ್ನೆಗೆ ಉತ್ತರಿಸುತ್ತ:-ಎಲ್ಲ ಸಾಧನೆಗೂ ಮೊದಲ ಮೆಟ್ಟಿಲು ನಿಷ್ಠೆ, ಶ್ರದ್ಧೆ ಮತ್ತು ಸದಾ ಜಾಗ್ರತವಾಗಿರುವ ಮನಸ್ಸು ಎಂದು ಹೇಳಿ ಈ ವಚನವನ್ನು ಹೇಳ ತೊಡಗಿದರು.

ವಚನ-೨೫:- ಮನವೇ ಸರ್ಪ, ತನುವೇ ಹೇಳಿಗೆ;
ಹಾವಿನೊಡತಣ ಹುದುವಾಳಿಗೆ !
ಇನ್ನಾವಾಗ ಕೊಂದಿಹುದೆಂದರಿಯೆ;
ಇನ್ನಾವಾಗ ತಿಂದಹುದೆಂದರಿಯೆ;
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲೊಡೆ
ಅದೇ ಗಾರುಡ ಮಂತ್ರ ಕೂಡಲ ಸಂಗಮದೇವಾ !

ಹಾವಿನೊಡನೆ ಕೂಡಿ ಬಾಳುವ ರೀತಿ ನಮ್ಮದು. ಸದಾ ಎಚ್ಚರಿಕೆಯಿಂದಿರಬೇಕು. ಕೂಡಲ ಸಂಗನಲ್ಲಿ ಭಕ್ತಿ ಎಲ್ಲಕ್ಕಿಂತ ಹೆಚ್ಚಿನ ಗಾರುಡ. ಇಲ್ಲವಾದರೆ "ಮೊಲ ನಿಂದ ಕರಕಷ್ಟ ನರನ ಬಾಳುವೆ" ಎಂದು ವ್ಯಾಪಕವಾದ ಉತ್ತರವನ್ನಿತ್ತರು.

ಇಷ್ಟೊಂದು ಲೌಕಿಕ, ಸಾಮಾಜಿಕ ಚಟುವಟಿಕೆಗಳನ್ನು ಕಟ್ಟಿಕೊಂಡಿದ್ದರೂ ಅಂತರಂಗದಲ್ಲಿ ಬಸವಣ್ಣನವರು ಬವಣೆಯಿಂದ ಹಾಡತೊಡಗಿದರು.

ವಚನ-೨೬:- ಎಂದೋ ಸಂಸಾರ ದಂದುಗ ಹಿಂಗುವುದು ?
ಎಂದೋ ಮನದಲ್ಲಿ ಪರಿಣಾಮ ಹಹುದೆನಗೆಂದೋ ?

ಕೂಡಲ ಸಂಗಮ ದೇವಾ ಇನ್ನೆಂದೋ ಪರಮ ಸಂತೋಷದಲ್ಲಿಹುದೆನಗೆಂದೋ ? ಸಂಸಾರವೆಂಬ ಬಲೆಯಲ್ಲಿ ಸಿಕ್ಕಿದೆನು ಎನ್ನುವನು ಕಾಯಯ್ಯ. "ಕಪ್ಪೆ ಸರ್ಪನ ನೆಳಲಲ್ಲಿಷ್ಟಂತೆನ ಗಾಯಿತ್ತಯ್ಯ ಅಕಟಕಟಾ ಸಂಸಾರ ವೃಥಾ ಹೋಯಿತ್ತಲ್ಲಾ!" ಎಂದು ಮನದಲ್ಲಿ ಬಳಲುತ್ತ ಭಕ್ತಿಯ ಮುಂದಿನ ಮೆಟ್ಟಲುಗಳನ್ನು ಹುಡುಕುತ್ತಾ ನಡೆಯುತ್ತಿರುವಾಗ ಹಾಡಿದ ವಚನ.

ಮಹಾಮನೆಯ ಕಾರ್ಯಕ್ಷೇತ್ರ ಬೆಳೆಯುತ್ತಾ ಬಂದಂತೆ ಬಸವಣ್ಣನ ಅಂತರಂಗದ ಮನೆಯೂ ರೂಪಗೊಳ್ಳುತ್ತಾ ಬಂದಿತ್ತು. ಆಗ ಉಗಮವಾದ ಮತ್ತೊಂದು ವಚನ:

ವಚನ-೨೭

ಕೆಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ದನಾಗನೇಕಯ್ಯಾ ?
ಕೈಯ್ಯಮುಟ್ಟಿ ಪೂಜಿಸುವರೆ ಎನ್ನ ಕೈ ಶುದ್ಧವಿಲ್ಲವಯ್ಯಾ !
ಮನ ಮುಟ್ಟಿ ಪೂಜಿಸುವರೆ, ಎನ್ನ ಮನಶುದ್ದವಿಲ್ಲವಯ್ಯಾ !
ಭಾವಶುದ್ಧ ವಾದೊಡೆ ಕೂಡಲ ಸಂಗಯ್ಯಾನು-ಇತ್ತ ಬಾ
ಎಂದೆತ್ತಿ ಕೊಳ್ಳನೇಕಯ್ಯಾ ? ಎಂದು ಚಿಂತಾಕ್ರಾಂತತೆಯಲ್ಲಿ
ಲೀನನಾಗಿದ್ದ ಬಸವಣ್ಣ.

ಮತ್ತೊಮ್ಮೆ ಬಿಜ್ಜಳನ ಆಸ್ಥಾನದಲ್ಲಿ ಅಸಹನೀಯ ಬ್ರಾಹ್ಮಣರಗುಂಪು ವರ್ಣಾಶ್ರಮದ ಹಿಂದೂ ಸಮಾಜದ ಪರಿ ವಿವರಿಸುತ್ತ ಬಸವಣ್ಣನು ಎಲ್ಲ ಶೂದ್ರರಿಗೂ ಲಿಂಗ ಕಟ್ಟಿ ಎಲ್ಲರೂ ಸಮಾನರೆಂದು ಘೋಷಿಸುತ್ತ ಸಮಾಜದ್ರೋಹ ನಡೆಸುತ್ತಿರುವನೆಂದು ಗುಂಪಿನ ಮುಂದಾಳಾದ ದಾಮೋದರ ಪಂಡಿತ ತಿಳಿಸಿದ. ಆಗ ಬಸವಣ್ಣ ಪ್ರಾಣಿಗಳನ್ನು ಬಲಿಕೊಟ್ಟು ಮಾಡುವ ಕರ್ಮಯಜ್ಞಗಳಿಗಿಂತ ಜ್ಞಾನ ಯಜ್ಞ ಶ್ರೇಷ್ಠವೆಂದು ಉಪನಿಷತ್ತು ಸಾರಿತು. ಆದರೆ ಹಿಂಸಾ ಮೂಲವಾದ ಯಜ್ಞವು ನಡೆಯುತ್ತಲೇ ಇದೆ. ಹೀಗೆಂದು ಹೇಳಿ ಒಂದು ವಚನವನ್ನು ಬಿಜ್ಜಳನ ಸಭೆಯಲ್ಲಿ ಉದಹರಿಸಿದನು.

ವಚನ-೨೮ - ಮಾತಿನ ಮಾತಿಂಗೆ ನಿನ್ನ ಕೊಂಡಹರೆಂದು ಎಲೆ ಹೋತೇ ಅಳು ಕಂಡಾ!
ವೇದವನೋದಿದವರ ಮುಂದೆ ಅಳು ಕಂಡಾ!
ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ!
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.



ಈ ದಯದ ಮನೋಧರ್ಮವನ್ನು ಅಳವಡಿಸಿ ಕೊಳ್ಳಬೇಕು. ಅಲ್ಲದೆ ವರ್ಣವನ್ನು ನಿರ್ಧರಿಸುವುದು ಹುಟ್ಟನಿಂದಲ್ಲ ಗುಣದಿಂದ ಎಂದು ಹೇಳಿ ಮುಂದಿನ ವಚನದಿಂದ ವಿವರವನ್ನಿತ್ತನು.

ವಚನ:- ೨೯:- ಹೊಲೆ ಗೊಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.
ಜಲ ಬಿಂದುವಿನ ವ್ಯವಹಾರ ಒಂದೇ, ಆಶೆ ಯಾಮಿಷ ರೋಷ,
ಹರುಷ ವಿಷಯಾದಿಗಳೆಲ್ಲಾ ಒಂದೆ. ಏನ ನೋದಿ ಏನಕೇಳಿ-ಏನುಫಲ ?
ಕುಲಜ ನೆಂಬುದಕ್ಕಾವುದು ದೃಷ್ಟ ?

" ಸಪ್ತಧಾತು ಸಮಂ ಪಿಂಡಂ ಸಮ ಯೋನಿ ಸಮುದ್ಭವಂ ಆತ್ಮ ಜೀವ ಸಮುತ್ಪನ್ನಂ ವರ್ಣಾನಾಂ ಕಿಂಪ್ರಯೋಜನಂ ," ಎಂದು ಹೇಳಿ-ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ ? ಇದು ಕಾರಣ ಕೂಡಲಸಂಗಮದೇವಾ ಅಂಗ ಸ್ಥಲವ ನರಿದವನೇ ಕುಲಜನು-ಎಂದಾಗ ಅಲ್ಲಿದ್ದ ಬ್ರಾಹ್ಮಣರ ಗುಂಪು ಆದನ್ನೊಪ್ಪದೆ ಶೂದ್ರ ಬ್ರಾಹ್ಮಣನಾಗ ಬಲ್ಲನೆ ಪೂಜೆ ಮಾಡಿದರೆ ? ಎಂದಾಗ ಬಸವಣ್ಣ ಸರ್ವರಿಗೂ ಸಮಬಾಳು ಎಂಬದು ನನ್ನ ವಿವರಣೆ. ಎಲ್ಲ ಜೀವಿಗಳಿಗೂ ನ್ಯಾಯ ದೊರಕಿಸಿ ಕೊಡುವುದು ಎಂಬುದೇ ನನ್ನ ವಿವರಣೆ ಎಂದನು.

ಅಣ್ಣನ ಕರುಣೆಯ ಪ್ರಭಾವದಿಂದ ದೇವರ ದಾಸಿಮಯ್ಯನೆಂದನು ಹುಟ್ಟುತ್ತ ನಾವೆಲ್ಲರೂ ಒಂದೇ. ಸ್ತ್ರೀ ಪುರುಷರು, ಮೇಲು ಕೀಳು ಜಾತಿಭೇದಗಳು ಆತ್ಮನಿಗಲ್ಲ ಎಂದು ತಿಳಿಸುತ್ತ ಈ ವಚನವನ್ನು ಹೇಳತೊಡಗಿದನು.

ವಚನ-೩೦:- ಮಡದಿಯ ಪ್ರಾಣಕ್ಕೆ ಮೊಲೆ ಮೂಡಿ ಇದ್ದಿತೇ ?
ಒಡೆಯನ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ ?
ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ ?
ನೀ ತೊಡಕಿಕ್ಕಿದ ತೊಡಕ ನೀಲೋಕದ ಜಡಶಿತ್ತ ಬಲ್ಲರೈ
ರಾಮನಾಥ-ನಾವು ಹುಟ್ಟುವಾಗಲೇ ಸೇವೆಯ ಕೋಲನ್ನು
ಹಿಡಿದು ಹುಟ್ಟುವುದಿಲ್ಲ ಎಂದು ನುಡಿದನು.

ವೇದಗಳ ವಿಚಾರದಲ್ಲಿ ಬಸವಣ್ಣನು ವಿರೋಧ ತೋರಿಸಿ-ಅಂತಹ ವೇದಗಳಿಂದ ನಾನು ಭಿನ್ನ ನಾದವನು ಎಂದು ಈ ವಚನವನ್ನು ನೀಡಿದ

ವಚನ-೩೧:- ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವೆ. ಆಗಮದ ಮೂಗ ಕೊಯಿವೆ-ನೋಡಯ್ಯಾ !
ಮಹಾದಾನಿ ಕೂಡಲಸಂಗಮದೇವಾ ಮಾದಾರ ಚನ್ನಯ್ಯನ ಮನೆಯ ಮಗ ನಾನಯ್ಯ-ಎಂದು ವಿವರಿಸಿದ. ಅಲ್ಲದೆ "ಸರ್ವೇಜನಾಃ ಸುಖಿನೋಭವಂತು" ಎಲ್ಲರೂ ಸಮಾನವಾಗಿ ಬಾಳಲು ಅವಕಾಶ ಕಲ್ಪಿಸಿ ಕೊಡಬೇಕೆಂದು ವಿವರ ವಿತ್ತನು.

ಮುಂದೆ ಆಂಧ್ರಪ್ರದೇಶದಿಂದ ಬಂದ ಕಿನ್ನರಿಬೊಮ್ಮಯ್ಯನು ಅಕ್ಕಸಾಲಿ ಕಿನ್ನರಿ ಬಾರಿಸುತ್ತ ಕಲ್ಯಾಣದಲ್ಲಿ ವಚನಗಳನ್ನು ಹಾಡುತ್ತಿದ್ದನು. ಒಮ್ಮೆ ಆತನು ಮಡಿವಾಳಮಾಚಿದೇವರ ಈ ವಚನವನ್ನು ಹಾಡುತ್ತಾ ಬಂದನು.

ವಚನ-೩೨:- ಎತ್ತೆತ್ತ ನೋಡಿದೊಡತ್ತತ್ತ ಬಸವನೆಂಬ ಬಳ್ಳಿ,
ಎತ್ತಿ ನೋಡಿದೊಡೆ ಲಿಂಗವೆಂಬ ಗೊಂಚಲು,
ಒತ್ತಿ ಹಿಂಡಿದೊಡೆ ಭಕ್ತಿಯೆಂಬ ರಸವಯ್ಯ;
ಆಯತವು ಬಸವಣ್ಣನಿಂದ, ಸ್ವಾಯತವು ಬಸವಣ್ಣನಿಂದ ;
ಸನ್ನಿಹಿತವು ಬಸವಣ್ಣನಿಂದ, ಇದು ಬಲ್ಲರೆ ನೀವು ಹೇಳಿರೆ,
ಇತ್ತ ಬಲ್ಲರೆ ನೀವು ಕೇಳಿರೆ-ಬಸವ-ಬಸವಾ ಎಂದವನ
ಭಕ್ತಿ ಶೂನ್ಯ ಕಾಣಾ ಕಲಿದೇವರದೇವಾ-ದಾರಿಯಲ್ಲಿ ಸಾಲಾಗಿ
ನಿಂತ ಇದನ್ನು ಕೇಳಿ ಆನಂದಿಸಿದರು.

ಎಲ್ಲ ಶರಣರ ಗುಂಪು ಒಮ್ಮೆ ಕಲ್ಯಾಣದಲ್ಲಿ ಸೇರಿತ್ತು. ಬಹುರೂಪಿ ಚೌಡಯ್ಯ ಕಲ್ಯಾಣದ ಕಡೆಗೆ ಧಾವಿಸುತ್ತ.

ವಚನ-೩೩

ಇನ್ನಾಡುವೆ ಜಂಗಮ ಬಹುರೂಪ! ಈ ಲೋಕಕ್ಕೆ ಬಂದಿನ್ನು ಆಗು ಹೋಗೆನಯ್ಯಾ! ಆನುಹೋದೆನಾದರೆ ಎನಗಿದ್ದ ಠಾವಿಲ್ಲ. ಮುನ್ನ ಹೋದವರೆಲ್ಲರೂ ತಗರಾಹಿನಲ್ಲಿ ಕುಳ್ಳಿರ್ದರು. ಆನುಗಹನವನರಿತೆನಾಗಿ ಒಲ್ಲದೆ ಬಂದೆನಿಲ್ಲಿಗೆ. ಇಲ್ಲಿನ್ನೋ ಮದ್ದಳೆಗೆ. ಒಲ್ಲೆನೆನ್ನೊ ಕಹಳೆಕಾರ. ಬಿಂದು ಹರಿದುನಿಂದು ಹಾಕಿರೋ ಹಣತಿಯರಿರಾ! ತಾಳ ವಿತಾಳವಾಯಿತ್ತಲ್ಲಾ! ನಾದ ಸುನಾದವಾಯಿತ್ತಲ್ಲಾ! ಕೆಳಗಾಗಿ ಶೂನ್ಯವಾಯಿತ್ತಲ್ಲಾ!



ರೇಕಣ್ಣ ಪ್ರಿಯನಾಗಿ ನಾಥ. ಬಸವನಿಂದ ಬದುಕಿರೇ ಲೋಕವೆಲ್ಲ- ಈ ರೀತಿ ಹಾಡುತ್ತ ಕಲಾ ಪ್ರದರ್ಶನದ ಸಂಚಾರವನ್ನು ಕೈಕೊಂಡು ಕಲ್ಯಾಣಕ್ಕೆ ಬಂದನು ಚೌಡಯ್ಯ.

ನಂತರ ಸಭೆಯಲ್ಲಿ ಕಲಕೇತ ಬೊಮ್ಮಯ್ಯನ ವಿಚಿತ್ರಾಕೃತಿ-ಅವನು ನುಡಿದ

ವಚನ-೩೪:- ಜಗಕ್ಕಹುದಾದುದನಿತ್ತು; ಜಗಕ್ಕಲ್ಲವಾದುದ ಕೊಟ್ಟು;
ಜಗ ಹಿಡಿದುದ ಬಿಟ್ಟು, ಜಗಬಲ್ಲದುದ ಕೊಟ್ಟು,
ಕಾನರಿದುದ ಮರೆದು, ಆ ಮರವೆ ಗೊಡಲಾದುದ ಮೆರೆದು,
ಉಭಯದ ಕೋಡ ಕಿತ್ತು ನಲಿದೊಲವಿನ-ಕೊಂಬಿನ
ಸಿರಿಗೆಯಲ್ಲಿ ಒಲಿದಾಡುವೆ; ಜಗಭಂಡರಂಗಣದಲ್ಲಿ
ಕುಳಿದಾಡುತ್ತಲಿರಬೇಕು. ಈ ವಚನವನ್ನು ಕೇಳಿ ಬಸವಣ್ಣ ತುಂಬಾ
ಮೆಚ್ಚುಗೆ ತೋರಿ ಜನಕ್ಕೆ ತಿಳಿವಂತೆ ವಿಸ್ತರಿಸಿದ..

ಮತ್ತೊಬ್ಬ ಶರಣ ಮದ್ದಳೆಯ ಮುದ್ದಯ್ಯ, ಘಟವಾಳಯ್ಯನಾಗಿ ನಾಮ-ಪರಿವರ್ತನೆಗೊಂಡು ಕಲ್ಯಾಣದಲ್ಲಿ ಮಹಾಶರಣನಾದ. ಕಾರಣ-ಆತನ ಕಥೆಯನ್ನು ಕೇಳಿ:-

ನಾನು ಮೊದಲು ಮುದ್ದಯ್ಯನೆಂಬ ಹೆಸರಿನ ನರ್ತಕನಾಗಿದ್ದೆ. ಮದ್ದಳೆ ನುಡಿಸುತ್ತ ಕುಣಿ ಕುಣಿದು ಹಾಡುತ್ತಿದ್ದೆ. ನನ್ನ ಪ್ರೀತಿಯ ಪತ್ನಿ ನಂಬಿಕೆ ದ್ರೋಹ ಮಾಡಿದಳು. ಕಾಲು ಜಾರಿ ಜಾರತನಕ್ಕೆ ಬಿದ್ದಳು. ಅದನ್ನು ಕಂಡು ನನ್ನ ಮನಸ್ಸು ಪರಿವರ್ತನೆಗೊಂಡಿತು. ಯಾವುದೋ ಶಕ್ತಿ ಜಾಗೃತವಾದಂತಾಯಿತು. ಬಸವಣ್ಣನವರ ಉಪದೇಶದ ಮಾತು ಆಗಾಗ ನನ್ನ ಕಿವಿಯ ಮೇಲೆ ಬಿದ್ದಿತು. ಇತ್ತ ಬಂದೆ ಕಲ್ಯಾಣಕ್ಕೆ ಎಂದು ಘಟವಾಳಯ್ಯ ನುಡಿದ ವಚನ.

ವಚನ :- ೩೫ ಹೊನ್ನು ಹೆಣ್ಣು ಮಣ್ಣು ತನ್ನದೆಂಬುವ ಮೂರ್ಖ,
ಹೊನ್ನು ಭೂಪಾಲರಿಗೆ, ಹೆಣ್ಣೊಲಿದ ಕಾಮುಕಗೆ;
ಮಣ್ಣು ಬಲವಂತಗಲ್ಲದೆ ಬರಿಯು ಭ್ರಾಂತಿಯಲ್ಲಿ
ಕಣ್ಣುಗೆಟ್ಟರೆ ಬರುವುದೇ ? ಎಂದು ಹಾಡಿ-ಮುದ್ದಯ್ಯ

ಸತ್ತು ಘಟವಾಳಯ್ಯ ನಾಮದಲ್ಲಿ ಉದಯಿಸಿದ. ಅಲ್ಲದೆ ಅಣ್ಣನವರ "ನೀನೊಲಿದರೆ ಕೊರಡು ಕೊನರುವುದಯ್ಯಾ" ಈ ವಚನವನ್ನು ಕೇಳಿದ್ದೆ. ಕಲ್ಯಾಣಕೆಕ್ಕೆ ಬಂದೆ ಎಂದನು, ಪರಮಾತ್ಮನ ಒಲುಮೆಯಿಂದ ಸಕಲವೂ ಕೈಗೂಡುವುದೆಂದು ತಿಳಿದೆ ಎಂದನು. ಅದೂ ಅಲ್ಲದೆ ಈ ವಚನವನ್ನು ಕೇಳಿದ್ದೆ.

**ವಚನ ೩೬:-** ಆಶೆಯೆಂಬ ಪಾಶದಲ್ಲಿ ಭವ ಬಂಧನ ನಾಗಿರ್ದೆನಯ್ಯಾ,
ಸಿಕ್ಕಿತು ನಿಮ್ಮ ನೆನೆಯ ಲೆನಗೆತೆರಹಿಲ್ಲವಯ್ಯಾ !
ಕರುಣಾಕರ ಅಭಯಾಕರ ವರದಾನೀ ಕರುಣಿಸಯ್ಯಾ
ಸಂಸಾರ ಬಂಧವನು ಮಾಣಿಸೆನಗೆ ಕೃಪೆಮಾಡಿ. ನಿಮ್ಮ
ಶ್ರೀ ಪಾದ ಪದ್ಮದಲ್ಲಿ ಭ್ರಮರನಾರಿಸು, ಭಕ್ತಜನ
ಮನೋವಲ್ಲಭಾ ಕೂಡಲ ಸಂಗಮದೇವಾ-ಎಂದು
ಸಭೆಯಲ್ಲಿ ನುಡಿದನು.

ನಂತರ ಕಿನ್ನರಿ ಬೊಮ್ಮಣ್ಣನೆಂಬ ಮತ್ತೊಬ್ಬ ಶರಣ ಹೇಳ ತೊಡಗಿದ-ಮಡಿವಾಳ ಮಾಚಯ್ಯ ನವರು ಹೇಳಿರುವಂತೆ-"ಎತ್ತೆತ್ತ ನೋಡಿದೊಡೆ ಅತತ್ತ ಬಸವ ನೆಂಬ ಬಳ್ಳಿ" ಹಬ್ಬಿ ಎಲ್ಲೆಲ್ಲೂ ಲಿಂಗಟ ಗೊಂಚಲು ಬಿಟ್ಟದೆ. ಆ ಲಿಂಗದ "ಉಂಡಿಗೆಯ ಪಶುವಾಗಿ ಪಶುಪತಿಯ ಬಳಿಗೆ ನಾವು ಬಂದಿದ್ದೇವೆ. ಕಲ್ಯಾಣದೆಡೆಗೆ ಎಂದು ಹೇಳಿ ನಂತರ ಮತ್ತೊಂದು ವಚನ

**ವಚನ ೩೭:-** ಇವನಾರವ, ಇವನಾರವ, ಇವನಾರವ ನೆಂದಿನಿಸದಿರಯ್ಯಾ
ಇವ ನಮ್ಮವ ಇವನಮ್ಮವ, ಇವನಮ್ಮವ ನೆಂದೆನಿಸಯ್ಯಾ
ಕೂಡಲ ಸಂಗಮ ದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ

ಎಂದು ನುಡಿವ ಶಿವನ ಮನೆಯ ಮಗನಾದ ನಂದೀಶ್ವರನ ಮನೆಗೆ ಬಂದದ್ದೇವೆ ಎಂದು ಬಸವಣ್ಣನನ್ನು ಬಹಳವಾಗಿ ಕೊಂಡಾಡಲು ಆಗ ಬಸವಣ್ಣ ವಿನಯದಿಂದ ಸಭೆಗೆ ಕೈಮುಗಿದು ಹೇಳತೊಡಗಿದ.

**ವಚನ ೩೮:-** ಎನ್ನವರೊಲಿದು ಹೊನ್ನ ಶೂಲದ ಲಿಕ್ಕಿದರೆನ್ನ ಹೊಗಳಿ ಹೊಗಳಿ
ಎನ್ನ ಹೊಗಳಕ್ಕೆ ಎನ್ನ ನಿಮ್ಮೆಯ್ಗೊಂಡಿತ್ತಲ್ಲಾ ! ಅಯ್ಯೋ !
ನೊಂದೆನು. ಸೈರಿಸಲಾರೆನು. ಕೂಡಲ ಸಂಗಮ ದೇವಾ, ನೀ
ನೊಳ್ಳಿದ ನಾದರೆ ಎನ್ನ ಹೊಗಳಿಕೆಗಡ್ಡ ಬಾರಾಧರ್ಮೀ

ಎಂದು ಬಸವಣ್ಣನವರು ಪಶ್ಚಾತ್ತಾಪ ಪಡುತ್ತಿರಲು ಆಗ ಕಿನ್ನರಿ ಬೊಮ್ಮಯ್ಯ ಮೊದಲಾದವರು ಅಣ್ಣನವರಲ್ಲಿ ಕ್ಷಮಾಪಣೆ ಬೇಡಿದಂತಾವರಾದರು.



## ಕ್ರಾಂತಿ ಶಿಕ್ಷಕನಿಂದಲೇ ನಡೆಯಬಲ್ಲದು

ಬಿ. ಸುಬ್ರಾಯ ಅಡಿಗ. ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ 583 119.

ಆಗಾಗ್ಗೆ ಕ್ರಾಂತ್ರಿಯ ಮಾತು ಕೇಳಿಬರುತ್ತದೆ. ಆದರೆ ಈ ಕ್ರಾಂತಿಯನ್ನು ಆದಾರು ಮಾಡುವವರು!-ಎಂಬ ಪ್ರಶ್ನೆ ಎದುರಾಗುತ್ತದೆ. ಸ್ವಾರ್ಥಕ್ಕಾಗಿ ಸಿದ್ಧಾಂತಗಳನ್ನು ಗಾಳಿಗೆ ತೂರಿ ಹೆಜ್ಜೆಹೆಜ್ಜೆಗೆ ಪಕ್ಷಾಂತರ ಮಾಡುವ ರಾಜಕೀಯ ಪುಡಾರಿಗಳು ಇದನ್ನು ಮಾಡುವರೆ? ಕ್ರಾಂತಿಯ ಅರ್ಥವನ್ನೇ ಅರಿಯದ ವಿದ್ಯಾರ್ಥಿಗಳು ಇದನ್ನು ಮಾಡುವರೇ ಅಧಿಕಾರಿಗಳ ಬಾಲ ಬಡಕರೆನಿಸಿದ ಬುದ್ಧಿಜೀವಿಗಳು ಈಕಾರ್ಯ ಎಸಗುವರೇ ಅಥವಾ ಬದುಕಿನ ಹೋರಾಟದಲ್ಲೇ ಮುಳುಗಿದ ಬಡ ಬೋರೇಗೌಡ ಇದರಲ್ಲಿ ತೊಡಗುವನೆ?

ವಾಸ್ತವವಾಗಿ ಶುದ್ಧ ಸ್ವಾರ್ಥಗಳಿಂದ ಹೊರತಾದವನಷ್ಟೇ ಸಾಮಾಜಿಕ ಕ್ರಾಂತಿ ನಡೆಸಬಲ್ಲ. ತನ್ನನ್ನು ಲಕ್ಷಿಸದೆ ಇತರರ ಒಳಿತನ್ನೇ ಯೋಚಿಸುವ ಶಿಕ್ಷಕನಿಂದಲೇ ಇದು ಸಾಧ್ಯ.

ಶಿಕ್ಷಕ ಸರಳ, ಮುಗ್ಧ ಹಾಗೂ ಸಾಮಾಜದ ಉದ್ಧಾರದ ಪಣ ತೊಟ್ಟವನು. ಬಡತನದಿಂದ ಬೇಯುತ್ತಿದ್ದರೂ, ನಗು ನಗುತ ಸಮಾಜದ ಏಳಿಗೆಗಾಗಿದುಡಿಯುವವನು. ಅವನ ಸೇವೆಯನ್ನು ಎಲ್ಲರೂ ಪ್ರಶಂಸಿಸುತ್ತಾರೆ. ಆದರೆ ದುರ್ದೈದಿಂದ ಇಂದಿನ ಶಿಕ್ಷಕ ಆ ಮಟ್ಟದಲ್ಲಿ ಉಳಿದಿಲ್ಲ. ಹಿಂದೆ ತ್ಯಾಗಿ ತಪಸ್ವಿ ಹಾಗೂ ನಿಃಸ್ವಾರ್ಥಿಯಾಗಿದ್ದು ಸತ್ಯಕ್ಕಾಗಿ ರಾಜದಂಡಕ್ಕೂ ಬೆದರದ ಆ ವ್ಯಕ್ತಿ ಈ ಇಂದು ನೀತಿ ಭ್ರಷ್ಟನಾಗಿದ್ದಾನೆ.

ಹಿಂದೊಂದು ಕಾಲದಲ್ಲಿ ನಮ್ಮ ಶಿಕ್ಷಕ ದೇವನಾಗಿದ್ದ. ಕಬೀರನೆಂದಂತೆ ಗುರು ಮತ್ತು ಗೋವಿಂದ ಇಬ್ಬರೂ ಒಟ್ಟಿಗೇ ನಿಂತಾಗ ಮೊದಲು ಗುರುವನ್ನೇ ನಮಸ್ಕರಿಸಬೇಕು. ಏಕೆಂದರೆ ಆವನ ದಯೆಯಿಂದಲೇ ಗೋವಿಂದನ ದರ್ಶನ ದೊರೆಯುವುದು. ಗುರುಕೃಪೆ ಇಲ್ಲದಿದ್ದರೆ ಪರಮಾತ್ಮನೂ ಸಿಗಲಾರ.

ಮನುಷ್ಯನಲ್ಲಿ ಸತ್-ಅಸತ್, ದೇವತ್ವ-ಪಶುತ್ವ ಎರಡೂ ಒಟ್ಟಾಗಿವಾಸಿಸುತ್ತವೆ, ಅವನಲ್ಲಿನ ಪಶುತ್ವವನ್ನು ಹೋಗಲಾಡಿಸಿ ದೇವತ್ವವನ್ನು ಜಾಗ್ರತಿ ಗೊಳಿಸುವುದೇ ಶಿಕ್ಷಕನ ಕೆಲಸ. ಆಗ ಆತ ನಿಜಕ್ಕೂ ಸಮಾಜೋಪಯೋಗಿ ಆಗಬಲ್ಲ. ಈ ಸತ್ಕಾರ್ಯವನ್ನು ಶಿಕ್ಷಕನಷ್ಟೇ ಸಾಧಿಸಬಲ್ಲ.

ಆದರೆ ದುರ್ದೈವದ ಸಂಗತಿಯೇನೆಂದರೆ ಇಂದು ಶಿಕ್ಷಕನಿಗೆ ತನ್ನ ಶಕ್ತಿಯ ಅರಿವಿಲ್ಲ. ಆತ ಶಿಕ್ಷಣವನ್ನು ಸೇವೆಯ ಬದಲು ಉದ್ಯೋಗದ ರೂಪದಲ್ಲಿ ಅಂಗೀಕರಿ

ಸಿದ್ದಾನೆ. ಈಗ ವಿದ್ಯಾರ್ಥಿಗಳ ಭವಿಷ್ಯವಲ್ಲ-ತಮ್ಮ ಭವಿಷ್ಯವೇ ಅವನ ಗುರಿಯೆನಿಸಿದೆ. ಎಂತಲೇ ಇಂದಿನ ಶಿಕ್ಷಕ ಸಂಬಳ, ಪದವಿ, ಪ್ರತಿಷ್ಠೆ ಮೊದಲಾದುವುಗಳಿಗಾಗಿ ತೊಳಲಾಡುವಂತೆ ವಿದ್ಯಾರ್ಥಿಗಳತ್ತ ಗಮನ ಕೊಡುತ್ತಿಲ್ಲ. ಹೀಗಾಗಿ ಸಮಾಜದಲ್ಲಿ ಅವನ ಆದರ ದಿನದಿನಕ್ಕೆ ಕುಗ್ಗುತ್ತಿದೆ.

ತನ್ನ ಶಿಷ್ಯರಲ್ಲಿ ಆತ್ಮ ಸಮ್ಮಾನ, ಆತ್ಮ ವಿಶ್ವಾಸ, ಪ್ರೇರಣೆ, ಸಾಹಸ, ಉತ್ಸಾಹ ವಿನಯಶೀಲತೆ–ಮೊದಲಾದ ಭಾವನೆಗಳನ್ನು ಜಾಗ್ರತಗೊಳಿಸುವ ಕೆಲಸವನ್ನು ಆತ ಎಂದೋ ಬಿಟ್ಟುಗೊಟ್ಟಿದ್ದಾನೆ. ಇಂದಿನ ವಿದ್ಯಾರ್ಥಿಗಳಲ್ಲಿ ನಡತೆಯೇ ಉಳಿದಿಲ್ಲವೆಂದು ಸ್ವತಃಸಾರುತ್ತ ತಿರುಗಾಡುತ್ತಿದ್ದಾನೆ. ಈಗ ಅವನಿಗೆ ಕೈತುಂಬ ಸಂಬಳ ಬೇಕು____ ಸರಕಾರಿ ಪದವಿಬೇಕು, ಪಾಸು ಮಾಡಿಸಲು ಟ್ಯೂಶನ್ ಹೆಸರಿನಲ್ಲಿ ವಿಪುಲ ಹಣ ಬೇಕು. ಕಾಲೇಜಿನಲ್ಲಿದ್ದರೆ ಹಲವಾರು ವಿಶ್ವವಿದ್ಯಾಲಯಗಳ ಪರೀಕ್ಷಕನೆನಿಸುವ ಸೌಲಭ್ಯಬೇಕು. ಸಮರ್ಥ ವಿಶ್ವವಿದ್ಯಾಲಯಗಳ ಕಮಿಟಿಯ ಸದಸ್ಯತ್ವಬೇಕು. ಆತ ವಿವಿಧ ಗೈಡ್ ತಯಾರಿಸಿ ಬಲಾತ್ಕಾರವಾಗಿ ಮಾರುತ್ತಾನೆ. ಪರೀಕ್ಷೆಗಳಲ್ಲಿ ಕಾಪಿ ಹೊಡೆಸುತ್ತಾನೆ. ಲಂಚ ಪಡೆದು ಸ್ವತಃ ಮಾರ್ಕು ಹೆಚ್ಚಿಸುವುದಲ್ಲದೆ ಇತರ ಪರೀಕ್ಷಕರಿಂದಲೂ ಆ ಕಾರ್ಯ ಮಾಡಿಸುತ್ತಾನೆ. ಪರೀಕ್ಷೆಗೆ ಸಂಬಂಧಿಸಿದ ಎಲ್ಲ ರೀತಿಯ ಅನೈತಿಕ ವ್ಯವಹಾರಗಳಲ್ಲೂ ಅವನ ಕೈವಾಡ ಇರುತ್ತದೆ.

ಇಂದು ಶಿಕ್ಷಕ ಅದೆಷ್ಟು ಲಾಂಛಿತನಾಗಿದ್ದಾನೆಂದರೆ. ಶಿಷ್ಯರು ಎದುರಿಗೇ ಅವನನ್ನು ಹೀಯಾಳಿಸುತ್ತಾರೆ. ವಿದ್ಯಾರ್ಥಿಗಳ ತಾಯಿತಂದೆಗಳು ಮನೆ ಮನೆಗಳಲ್ಲಿ ಅವನನ್ನು ಟೀಕಿಸುತ್ತಾರೆ. ಆತ ಹತ್ತಿಗಿಂತ ಹಗುರನೆನಿಸುತ್ತಾನೆ. ಗುರುವಿನ ಬಗ್ಗೆ ಇಂದಿನ ವಿದ್ಯಾರ್ಥಿಗಳಲ್ಲಿ ಅದೆಷ್ಟು ಅಪನಂಬಿಕೆ ಮೂಡಿದೆಯೆಂದರೆ ಅವನು ಕಲಿಸಿದುದನ್ನು ನಂಬದೆ ಗೈಡ್‌ಗಳನ್ನೇ ಹೆಚ್ಚು-ಹೆಚ್ಚು ಅವಲಂಬಿಸುತ್ತಾರೆ. ಇಂದಿನ ಶಿಕ್ಷಕ ಸ್ವತಃ ಗೈಡ್ ಹಾಗೂ ನೋಟ್ಸ್‌ಗಳ ನೆರವಿನಿಂದ ಪಾಠ ಮಾಡುತ್ತಿರುವಾಗ, ವಿದ್ಯಾರ್ಥಿಗಳು ಕೂಡ ಅವನ ಪಾಠವನ್ನು ಕಡೆಗಣಿಸುವುದರಲ್ಲಿ ಆಶ್ಚರ್ಯವೇನು ?

ಮೇಲೆ ಹೇಳಿದ ಎಲ್ಲ ಟೀಕೆಗಳೂ ಶಿಕ್ಷಕ ವೃಂದಕ್ಕೇ ಅನ್ವಯಿಸುವುವೆಂದು ಭಾವಿಸಬಾರದು. ಕರ್ತವ್ಯ ಮನೋಭಾವದಿಂದ ದುಡಿಯುವ ಶಿಕ್ಷಕರೂ ಇಲ್ಲದಿಲ್ಲ. ಆದರೆ ಅಂತಹ ಸಂಖ್ಯೆ ಬಲು ಕಡಿಮೆ. ಅವರು ಕೂಡ ದಿನ ದಿನಕ್ಕೆ ಕಡಿಮೆಯಾಗುತ್ತಿದ್ದಾರೆ.

ಇಂದಿನ ಈ ಪತನಕ್ಕೆ ಶಿಕ್ಷಕನೊಬ್ಬನೇ ಕಾರಣನೆಂದೂ ಹೇಳಬರುವಂತಿಲ್ಲ. ಮುಖ್ಯವಾಗಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ನಡೆದ ಶಿಕ್ಷಣದ ಪ್ರಸಾರವೂ ದೋಷಿಯೇ. ಮುಂದಾಲೋಚನೆಯಿಲ್ಲದೆ ಶಾಲಾ ಕಾಲೇಜುಗಳನ್ನು ಹೆಚ್ಚಿಸುತ್ತಾ ಹೋದರೆ ಅವು-ಗಳಿಗಾಗಿ ಯೋಗ್ಯ ಶಿಕ್ಷಕರನ್ನು ಅದೆಲ್ಲಿಂದ ತರಬೇಕು ?



ಶಿಕ್ಷಣ ನೀಡುವುದು ಸಂಬಳ ಪಡೆಯುವವರ ಕಸುಬಲ್ಲ. ಅದಕ್ಕೆ ತ್ಯಾಗ, ತಪಸ್ಸು ಹಾಗೂ ಆದರ್ಶಮಯ ಜೀವನ ಅಗತ್ಯ. ಆದರೆ ದಿನದಿನಕ್ಕೆ ಹೆಚ್ಚುತ್ತಿರುವ ವಿದ್ಯಾಲಯಗಳಿಗಾಗಿ ಆದರ್ಶ ಶಿಕ್ಷಕರು ಅದೆಲ್ಲಿ ದೊರೆಯುವರು ? ಎಂತಲೇ ಸಿಕ್ಕ ಸಿಕ್ಕವರನ್ನು ತಂದು ತುಂಬುವಂತಾಯಿತು. ಬೇರಾವ ಉದ್ಯೋಗಕ್ಕೂ ಯೋಗ್ಯವಲ್ಲದವನು ಶಿಕ್ಷಕನಾಗ ತೊಡಗಿದ.

ಅಪ್ಪಿ ತಪ್ಪಿ ಶಿಕ್ಷಕ ಸಿದ್ಧಾಂತಗಳಿಗೆ ಅಂಟಿಕುಳಿತರೂ ಸಮಾಜ ಅವನನ್ನು ಹೊಲಸು ರಾಜಕೀಯಕ್ಕೆ ಎಳೆಯದಿರುವುದಿಲ್ಲ. ಹಳ್ಳಿ ಹಳ್ಳಿಗಳಲ್ಲೂ ಇಂದು ರಾಜಕೀಯ ಪಕ್ಷಗಳ ಸೆಣಸಾಟ ಆರಂಭವಾಗಿದೆ. ಶಿಕ್ಷಕ ತಟಸ್ಥವಾಗಿ ಉಳಿದರೆ ಎಲ್ಲ ಪಕ್ಷಗಳು ಅವನನ್ನು ಮೆಟ್ಟಲು ಹವಣಿಸುತ್ತವೆ. ಹೀಗಾಗಿ ಆತ ಆತ್ಮ ರಕ್ಷಣೆಗಾಗಿ ಯಾವುದಾದರೊಂದು ಪಕ್ಷಕ್ಕೆ ಸೇರಿ ಕೊಳ್ಳುತ್ತಾನೆ. ಆಗಲೇ ಅವನ ಆದರ್ಶ ಮಣ್ಣುಗೂಡುತ್ತದೆ. ಶಿಕ್ಷಣದ ಉದ್ದೇಶ ಮೂಲೆಗುಂಪಾಗುತ್ತದೆ.

ಇಂದೂ ಶಿಕ್ಷಕ ಸಾಮಾಜಿಕ ಕ್ರಾಂತಿಯ ಅಗ್ರದೂತನೆನಿಸಬಲ್ಲ. ಅದಕ್ಕಾಗಿ ಆತ ಸಮಾಜದ ಬಗೆಗಿನ ತನ್ನ ಕಠೋರ ಹೊಣೆಗಾರಿಕೆಯನ್ನು ಅರಿತುಕೊಳ್ಳಬೇಕು. ಸರಕಾರ ಕೂಡ ಶಿಕ್ಷಕನ ವೈಯಕ್ತಿಕ ಹಾಗೂ ಪಾರಿವಾರಿಕ ಕಷ್ಟಗಳನ್ನರಿತು, ಆತ ನೆಮ್ಮದಿಯಿಂದ ಬಾಳುವಂತೆ ಎಲ್ಲ ರೀತಿಯ ಸೌಕರ್ಯಗಳನ್ನೊದಗಿಸ ಬೇಕು. ಸಮಾಜವೂ ಕ್ಷುದ್ರ ರಾಜಕೀಯಕ್ಕೆ ಅವನನ್ನೆಳೆಯದೆ, ಆತ ನಿಷ್ಠೆಯಿಂದ ತನ್ನ ಕರ್ತವ್ಯ ನಡೆಸುವಂತೆ ವಾತಾವರಣ ಕಲ್ಪಿಸಿ ಕೊಡಬೇಕು.

ಆಗಲೇ ದೇಶದಲ್ಲಿ ನೈಜ ಕ್ರಾಂತಿ ಸಂಭವಿಸಲು ಸಾಧ್ಯ. (ಸಂಗ್ರಹ)

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಪತ್ರಿಕೆಗಳು ಅವರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡು-ವುದರ ಮುಖೇನ "**ಸಿದ್ಧಗಂಗಾ**" ನಿಮಗೆ ಸುಗಮವಾಗಿ ತಲುಪಲು ನಮ್ಮೊಂದಿಗೆ ಸಹಕರಿಸಲು ಪ್ರಾರ್ಥನೆ. ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.

ಪ್ರಕಾಶಕರು.

# ಪ್ರಕೃತಿ

ಅ. ಬ. ಚನ್ನಬಸಪ್ಪ, F. I. 'ಬಸವಪ್ರಸಾದ' ಶಂಖರಮಠ, 2ನೇ ಕ್ರಾಸ್ ಮೈಸೂರು ಜಿಲ್ಲೆ.

ಪ್ರಕೃತಿಯು ದೇವರು. ಮಾನವ ಇದರ ಒಂದು ಅಣು. ಆದರೂ ಇದನ್ನು ಅಳಿಯಲು ಮುನ್ನುಗ್ಗುವನು: ಕೆಲವು ವೇಳೆಇದನ್ನು ಜಯಿಸಲು ತೊಡಗುವನು. ಈತ ಅಣುವಾಗಿದ್ದರೂ ಅಣು ಬಾಂಬನ್ನು ತಯಾರು ಮಾಡಿಕೊಂಡು ಚೇಷ್ಟೆ ಮಾಡುತ್ತಿರುವನು. ಚೇಷ್ಟೆ ಮಾಡಿ ಆಯಿತು. ನಾಗಸಾಕಿ, ಯೇಶಿಯಾಮುಗಳ ಮೇಲೆ ಆಟವಾಡಿದ್ದು, ನೋಡಿ ಆಯಿತಲ್ಲ! ವಿಶ್ವ ನಾಶವಾಯಿತೆ? ಇಲ್ಲ. ಹಾಗಾದರೆ ಪ್ರಕೃತಿಯೊಡನೆ, ಸೆಣಸಲು ಸಾಧ್ಯವೆ? ಅದರ ರೇಣುವನ್ನು ವಿಕೃತಗೊಳಿಸಬಹುದು! ಆದರೆ ಸಂಪೂರ್ಣವಾಗಿ ನಾಶ ಮಾಡಲಾರ!

ಆಧುನಿಕ ವಿಜ್ಞಾನಿಯ ಪ್ರಕಾರ "ಎಲ್ಲಿಯಾದರೂ ಒಂದು ಅಣು ಬಾಂಬನ್ನು ಸೇಡಿಗೋಸ್ಕರ ಹಾಕಿದರೆ ಇಡೀ ಮಾನವಕೋಟಿಯೇ ನಾಶವಾಗುವುದೆಂದು?" ಮಾನವ ಕೋಟಿಯೇ ಸಂಪೂರ್ಣ ಪ್ರಕೃತಿಯಾಗಲಿಲ್ಲವಲ್ಲ! ಪ್ರಕೃತಿಯ ಒಂದು ಅಣು ಮಾತ್ರ! ಇದರಿಂದ ನಾವು ತಿಳಿಯುವುದು ಏನನ್ನು "ತನ್ನ ಒಡಲ ಕಿಚ್ಚು ತನ್ನ ಸುಡುವುದಲ್ಲದೆ ಅನ್ಯರ ಸುಟ್ಟೀತೆ?" ತಾನು ನಾಶವಾಗುತ್ತಾನೆಯೇ ಹೊರತು ಪ್ರಕೃತಿಯನ್ನು ನಾಶ ಮಾಡಲಾರ.

ತತ್ವ ಮಾಡುವುದರಲ್ಲಿ ಧೀರ! ಆ ತತ್ವ ಆ ಕಾಲಕ್ಕೆ ಆ ನಾಗರೀಕತೆಗೆ ಸರಿ ಕಂಡು ಬರಬಹುದು. ವಿಶ್ವದಲ್ಲಿ ರಾಜ್ಯವನ್ನು ರೂಪಿಸಿದವರು "ರೋಮನ್ನರು. ಅವರು" Might is Right ಶಕ್ತಿಯೇ ಧರ್ಮ" ಎಂದು ಸಾರಿದರು. ಅದು ಧರ್ಮವೇ? ಧರ್ಮಕ್ಕೆ ಅಳಿವಿಲ್ಲ. ಹಾಗಾದರೆ ಅದಾವುದು? "ಸೂರ್ಯನಿಂದ ಪ್ರಪಂಚ! ಇದು ಸತ್ಯ-ಇದು ಧರ್ಮ-ಇದು ಪ್ರಕೃತಿ!

ಎಲೆ, ಮಾನವ! ಪ್ರಕೃತಿಯನ್ನು ನಾಶಮಾಡಲು ಯೋಚಿಸಬೇಡ ಪ್ರಯತ್ನಿಸಬೇಡ! "ಕೋತಿಯು ತಾನು ಕೆಡುವುದಲ್ಲದೆ ವನವೆಲ್ಲಾ ಕೆಡಿಸಿತು!" ಎಂಬ ಗತಿಯಾದೀತು! ಎಚ್ಚರಿಕೆ? ಅಬ್ರಹಾಂಲಿಂಕನ್ನಿನಿಂದ ಹಿಡಿದು ಮಹಾತ್ಮ ಗಾಂಧಿಯ ತನಕ ಅನೇಕ ಮಹನೀಯರು ಹುಟ್ಟಿದರು. ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ಪರಿಪಾಲನೆ ಮಾಡಿ, ಕೀರ್ತಿಗಳಿಸಿ ಹೋದರು. ಆದರೆ ಯಾರೂ ಪ್ರಕೃತಿಯ ಒಂದು ಅಣುವನ್ನು ಕೂಡಾ ತೆಗೆದುಕೊಂಡು ಹೋಗಲಿಲ್ಲ! ಅಂದಮೇಲೆ ಪ್ರಕೃತಿಯ ಭಾಗಕ್ಕೋಸ್ಕರ ಏಕೆ ಹೊಡೆದಾಡುವೆ? ಎಲೆ, ಮನುಜ; ಅನ್ಯರ ಸ್ವತ್ತಿಗೋಸ್ಕರ ಏಕೆ ಆಸೆ ಪಡುವೆ? ಪ್ರಕೃತಿಯನ್ನು ನೀನು ಗಳಿಸಿದ್ದೆಯಾ? ಅನ್ಯರ ಮನೆಗೇಕೆ ಆಸೆ? ಅದು ಅಧರ್ಮ! ಪ್ರಕೃತಿಯ ನಾಶಕ್ಕೆ ಕೈ ಹಾಕಿಯಾ! ಜೋಕೆ?



# ಶ್ರೀ ಮುದುದ್ದಾನೇಶ್ವರ ಶತಕಂ

(ಮುಂದುವರಿದುದು)

ನಿನ್ನನೋಟವೆ ಪುಣ್ಯಪೀಠವು
ನಿನ್ನಮೋದವೆ ನಿಜವಿನೋದವು
ನಿನ್ನವಾಕ್ಯವೆ ಶಿಷ್ಯೈಕ್ಯ ತವಕರ ಸ್ಪರ್ಶ ಶುಭವರ್ಷಾ।
ನಿನ್ನಕರುಣವೆ ಭವದ ತರಣಿಯು
ನಿನ್ನದರ್ಶನ ಸುಖವಿಮರ್ಶನ
ನಿನ್ನುಬಿಡದಲೆ ಜೀಯ ಉದ್ದಾನೇಶದಯವಾಗೋ ॥ ೨೬ ॥

ನಿನ್ನ ಮೂರ್ತಿಯೆ ವಿಶ್ವಮೂರ್ತಿಯು
ನಿನ್ನಪದವಿಳೆ ಶಿರವೆ ಸ್ವರ್ಗವು
ನಿನ್ನನಾಭಿಯೆ ಗಗನ ರವಿಶಶಿ ಶಿಖಿಯೆ ನೇತ್ರಗಳೂ।
ನಿನ್ನಕಿವಿದಿಗ್ವಾಯು ಶ್ವಾಸವು
ನಿನ್ನವದನವೆ ಹೋಮಕುಂಡವು
ಯನ್ನ ದೈವವೆ ಜೀಯ ಉದ್ದಾನೇಶದಯವಾಗೋ ॥ ೨೭ ॥

ನಿನ್ನರೂಪವೆ ಪ್ರಣವರೂಪವು
ನಿನ್ನನಾಮವೆ ಪ್ರಣವನಾಮವು
ನಿನ್ನಕಾರ್ಯವೆ ಪ್ರಣವಕರ್ಮವು ಪಾಪಸಂಹನ್ನಾ।
ನಿನ್ನಮೂರ್ತಿಯೆ ಪ್ರಣವಮೂರ್ತಿಯು
ನಿನ್ನಚೇತನ ಪ್ರಣವಚೇತನ
ನಿನ್ನಪ್ರಾಣವೇ ಜೀಯ ಉದ್ದಾನೇಶದಯವಾಗೋ ॥ ೨೮ ॥

ವಿಷಯಗಳ ನನುಭವದ ಕಾಯವಿ
ಜೊಸೆದು ಜನಿಮೃತಿಯಿಂದ ಬಳಲುವ
ದಸಮನಯನ ಭಜಿಸಿ ಸ್ವಾರ್ಥವನಳಿದ ನರಕಾಯಾ
ಪಶುಪತೀಶಗೆ ಪ್ರಿಯವಾಗಿಹ
ಹಸನು ತೆಂಗಿನಕಾಯಿ ಕಾಯಿದೆ
ನೊಸೆದು ನೀಡಿದೆ ಗ್ರಹಿಸುತುದ್ದಾನೇಶದಯವಾಗೋ ॥ ೨೯ ॥

# ಮೋಳಿಗೆಯ ಮಾರಯ್ಯನ ವಚನಗಳು

ಲೇಖಕರು: ಪ್ರೊ. ಎಸ್. ಎಸ್. ಭೂಸರಡ್ಡಿ, ಲಕ್ಷ್ಮೀನಗರ, ಧಾರವಾಡ-೪

ಬಸವಾದಿ ಪ್ರಮಥ ಪುಂಗವರ ಸಮಕಾಲೀನರಾಗಿ ಬೆಳಗಿದ ಶ್ರೇಷ್ಠ ಶಿವಶರಣರ ಶ್ರೇಣಿಯಲ್ಲಿ ಶೋಭಿಸುವ ಇನ್ನೊಬ್ಬ ಉತ್ತುಂಗ ವಚನಕಾರ ಮೋಳಿಗೆಯ ಮಾರಯ್ಯ. ಪ್ರಮುಖರಲ್ಲಿ ಕಾಯಕ ಸಿದ್ಧಾಂತವೇ ಮೈವೆತ್ತಿ ಬಂದ ಕಾಯಕಯೋಗಿ ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯರಂತೆ ಕಾಯಕದಲ್ಲಿಯೇ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಕೊಂಡ ಮಹಾನುಭಾವ, ಲೋಕಾನುಭಾವಿ. ಪ್ರಪಂಚದಿಂದ ಪಾರಮಾರ್ಥದ ಕಡೆಗೆ ಸಾಗಿದ ಸಾಧಕ; ಸಂಸಾರದಿಂದ ಸದ್ಗತಿ ಪಡೆದ ಪರಮ ಹಂಸ. ಅರಸೊತ್ತಿಗೆಯ ಸುಪ್ಪೊತ್ತಿಗೆಯನ್ನು ತೊರೆದು ಆತ್ಮಕಲ್ಯಾಣದೊಂದಿಗೆ ಲೋಕ ಕಲ್ಯಾಣ ಸಾಧಿಸಲು ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದ ಮಹಾದೇವ ಭೂಪಾಲ ಮೋಳಿಗೆಯ ಮಾರಯ್ಯನಾಗಿ ಪರಿವರ್ತನವಾದುದು ಒಂದು ರೋಮಾಂಚಕ ಘಟನೆ. ಬದುಕಿನ ಬೇಗುದಿಗೆ ಬೆಂದು ಬೆಂಡಾದ ಭೂಪಾಲ ಕಲ್ಯಾಣದ ಅನುಭವ ಮಂಟಪದ ಕಮ್ಮಟದಿಂದ ಹೊರಬಂದ ಚೊಕ್ಕ ಚಿನ್ನ. ಅವನೊಂದಿಗೆ ಆತನ ಮಡದಿ ಗಂಗಾದೇವಿಯೂ ಬೆನ್ನುಹತ್ತಿ ಬಂದು ಮಹಾದೇವಿಯಮ್ಮನಾಗಿ ಉತ್ಕೃಷ್ಟ ವಚನರಚನೆ ಮಾಡಿದುದು ಐತಿಹಾಸಿಕ ಸತ್ಯ. ಸುಮಾರು ೫೯ ವಚನಗಳು ಇದೀಗ ಉಪಲಬ್ಧವಾಗಿವೆ. ಹಾಗೆ ನೋಡಿದರೆ, ಇದೊಂದು ಅಪರೂಪದ ವಿರಳ ದಾಂಪತ್ಯವೆಂದು ಹೇಳಬಹುದು. ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎನ್ನುವ ಸೂಳ್ನುಡಿಗೆ ಸಾಕ್ಷಿಯಾಗಿದ್ದರು, ಪ್ರತಿದಿನ ಬೆಳಗಿನಲ್ಲಿ ಅರಣ್ಯಕ್ಕೆ ಹೋಗಿ ಕಟ್ಟಿಗೆಯನ್ನು ಕಡಿದು ತಂದು, ಮಾರಾಟಮಾಡಿ ಬಂದ ಹಣದಿಂದ ಜಂಗಮ ದಾಸೋಹ ಮಾಡುವುದು ಅವರ ಕಾಯಕವಾಗಿತ್ತು. ಕಾರೆಯ ಸೊಪ್ಪಾದರೂ ಸರಿ, ಸತ್ಯ ಶುದ್ಧ ಕಾಯಕದಿಂದ ಲಿಂಗಾರ್ಪಿತ ಮಾಡುವುದು ಕಾಯಕ ಸಿದ್ಧಾಂತ ಲಕ್ಷಣ. ಕಾಯಕ ಸಿದ್ಧಾಂತ ಬಸವಾದಿ ಪ್ರಮಥರು ಲೋಕಕ್ಕೆ ನೀಡಿದ ಮಹಾಕಾಣಿಕೆ. ಪ್ರತಿಯೊಬ್ಬರೂ ಕಾಯ ಕಷ್ಟ ಮಾಡಲೇಬೇಕೆಂಬ ಕಡ್ಡಾಯ ನಿಯಮವಾಗಿತ್ತು. ಬೆವರುಸುರಿಸಿ ದುಡಿಯದೆ ಉಣ್ಣುವುದು ಪಾಪವೆಂದು ಭಾವಿಸಿದ್ದರು. ಗುರುವಾದರೂ ಕಾಯಕದಿಂದಲೇ ಮುಕ್ತಿ ಪಡೆಯಬೇಕು. ಸಮತಾವಾದದ ಪುರಸ್ಕರ್ತರು ಶರಣರು ಈ ಬಗೆಗೆ ಸುದೀರ್ಘವಾದ ಚರ್ಚೆ ಅನುಭವ ಮಂಟಪದಲ್ಲಿ ಜರಗಿತು. ಈ ವಿಷಯವು ಶೂನ್ಯ ಸಂಪಾದನೆಯಲ್ಲಿ ಮನೋಜ್ಞವಾಗಿ ಮೂಡಿಬಂದಿದೆ. ಏನೇ ಇರಲಿ. ಕಾಶ್ಮೀರದಿಂದ ಬಂದ ಮಾರಯ್ಯ ಕಲ್ಯಾಣದಲ್ಲಿ ನೆಲೆ ನಿಂತು, ಮೋಳಿಗೆಯ ಕಾಯಕ ಕೈಕೊಂಡು ವಚನ ರಚನೆ ಮಾಡಿದುದು ಒಂದು ಸೋಜಿಗದ ಸಂಗತಿ ಏಕೆಂದರೆ ಇಂದು ಕರ್ನಾಟಕದಲ್ಲಿಯೇ ಹುಟ್ಟಿ ಕರ್ನಾಟಕದಲ್ಲಿಯೇ ಬೆಳೆದು ಕನ್ನಡ ಬರುವುದಿಲ್ಲವೆಂದು



ಹೇಳುವ ಮಂತ್ರಿ ಮಾನ್ಯರುಂಟು. ಕಲ್ಯಾಣದಲ್ಲಿ ದೇಶ ವಿದೇಶಗಳಿಂದ ಬಂದ ಶರಣರೆಲ್ಲರೂ ಅಚ್ಚ ಕನ್ನಡದಲ್ಲಿ ಸುಂದರವಾದ ಬಂದುರವಾದ ಸೊಗಸಾದ ತತ್ತ್ವಗಂಧಿ ವಚನಗಳನ್ನು ರಚಿಸಿ ಕನ್ನಡ ಭಾಷೆಯನ್ನು ರಾಷ್ಟ್ರೀಯ ಭಾಷೆಯನ್ನಾಗಿ ಮಾಡಿದುದು ಸಾಮಾನ್ಯ ಸಂಗತಿಯಲ್ಲ. ಮೋಳಿಗೆಯ ಮಾರಯ್ಯನ ಸುಮಾರು ೮೪ ವಚನಗಳು ದೊರೆತಿವೆ. ಅವು ಕನ್ನಡ ಭಾಷೆಯ ಜೀವರತ್ನಗಳಾಗಿವೆ ಸಾಹಿತ್ಯದ ಎಲ್ಲ ಲಕ್ಷಣಗಳನ್ನೊಳಗೊಂಡಿವೆ. ಈ ದಿಸೆಯಲ್ಲಿ ವೀರಶೈವ ಧರ್ಮಸಿದ್ಧಾಂತದ ವಿವೇಚನೆಯನ್ನು ಕೂಡ ಬಹುಸೊಗಸಾಗಿ ಮಾಡಿರುವುದು ಧರ್ಮ ತತ್ವ-ಜಿಜ್ಞಾಸುಗಳಿಗೆ ಆಪ್ಯಾಯಮಾನವಾಗಿವೆ. ಕಾಯಕ ಸಿದ್ಧಾಂತವನ್ನು ವಚನಗಳಲ್ಲಿ ಮೈಗೂಡಿಸಿಕೊಂಡು ಮೈವೆತ್ತಿ ಮೋಳಿಗೆಯ ಮಾರಯ್ಯನ ವಚನಗಳು ಅಭ್ಯಸನೀಯವಾಗಿವೆ. ಇಲ್ಲಿ ಕೆಲವು ವಚನಗಳನ್ನು ಮಾತ್ರ ಎತ್ತಿಕೊಂಡು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಮಾರಯ್ಯನ ವಚನಗಳ ಅಂಕಿತ ನಿಕಳಂಕ ಮಲ್ಲಿಕಾರ್ಜುನಾ, ಆದುದರಿಂದ ಇವನು ಶಿವಯೋಗಿ ಸಿದ್ಧರಾಮನಿಂದ ಪ್ರಭಾವಿತನಾಗಿರಬಹುದೆಂದು ಭಾವಿಸಬಹುದು.

ಲಿಂಗಾಂಗ ಸಮರಸ್ಯದ ಸವಿಸುಖದ ಸೊಬಗನ್ನು ದೃಷ್ಟಾಂತಗಳ ಸರಮಾಲೆಗಳಿಂದ ಮನಮುಟ್ಟುವಂತೆ ಹೇಳುವ ಈ ವಚನ ಮೆಲಕು ಹಾಕುವಂತಿದೆ.

"ಅಲ್ಲಿಗೆ ಮರ್ಕಟನಂತಾಗದೆ ಇಲ್ಲಿ ವಿಹಂಗಮನಂತಾಗದೆ,
ಈಚೆಯಲ್ಲಿಗೆ ಪಿಪೀಲಿಕನಂತಾಗದೆ,
ರಾಜಸ ತಾಮಸ ಸಾತ್ವಿಕದಲ್ಲಿ ಸಾಯದೆ,
ಭಾಗೀರಥಿಯಂತ-ಹೆಚ್ಚು ಕುಂದಿಲ್ಲದ ಮಾಸದ ಚಂದ್ರನಂತೆ,
ಕಲೆಯಿಲ್ಲದ ಮೌಕ್ತಿಕದಂತೆ
ರಜವಿಲ್ಲದ ರತ್ನದಂತೆ, ತೆರೆದೋರದ ಅಂಬುಧಿಯಂತೆ-
ಒಡಲಳಿದವಂಗೆ ನೆರೆ ಅರಿದವಂಗೆ
ಕುರುಹೆಂಬುದು ಆತ್ಮನಲ್ಲಿ ಘಟಸಿದವಂಗೆ ಬೇರೊಂದೆಡೆಯಿಲ್ಲ
ಆ ಗುಣವಡಗಿದಲ್ಲಿ ಪ್ರಾಣಲಿಂಗಿ ಸಂಬಂಧ
ಆ ಸಂಬಂಧ ಸಮಯ ಸ್ವಸ್ಥವಾದಲ್ಲಿ
ಐಕ್ಯಾನುಭಾವ ನಿಃಕಳಂಕ ಮಲ್ಲಿಕಾರ್ಜುನಾ"

ನಿನ್ನೊಡವೆಯೆಂಬುದು ಜ್ಞಾನರತ್ನನೋಡಾ ಎಂಬ ಅಲ್ಲಮಪ್ರಭು ವಾಣಿಯಂತೆ ಜ್ಞಾನಿಯ ಲಕ್ಷಣವನ್ನು ಅತ್ಯಂತ ಸೊಗಸಾಗಿ ಈ ವಚನದಲ್ಲಿ ನಿರೂಪಿಸಲಾಗಿದೆ.

"ಗಾಣದಲ್ಲಿ ಸಿಲುಕಿದ ಎಳ್ಳು ನೋಯದೆ ಎಣ್ಣೆಯ ಬಿಡುವುದೆ?
ಕಾಯದಲ್ಲಿ ಸಿಲುಕಿದ ಜೀವ, ನೋಯದೆ ಶರಣಂಗಳ ಬಿಡುವನೆ?
ಭಾವದಲ್ಲಿ ಸಿಲುಕಿದ ಭ್ರಮೆ, ನೋಯದೆ ವಿಕಾರವ ಬಿಡುವದೆ?
ಇಂತಿವನರಿದಲ್ಲದೆ ಜ್ಞಾನಲೇಪವಿಲ್ಲ ನಿಃ ಕಳಂಕ ಮಲ್ಲಿಕಾರ್ಜುನಾ"

ಆಶಾಪಾಶಗಳ ಮೋಹ ಜಾಲದಲ್ಲಿ ಬಿದ್ದು ಹೊರಳಾಡುವ ಮತಿಗೇಡಿಗಳನ್ನು ಅಂದು ಬಂದು ಇಂದು ಹೋಗುವ ಸಿರಿಯ ಮೆಚ್ಚಿ ಕೆಡಬೇಡೆಂದು ಆರುಹಿದ ಅಪಾರ ಅನುಭವದ ಅಮೃತವನ್ನೇ ಉಣಬಡಿಸಿದ ಈ ವಚನ ಅದೆಷ್ಟು ಮನೋಹರವಾಗಿದೆ; ನೋಡಿ.

'ಆನೆ ಕುದುರೆ ಭಂಡಾರವಿದ್ದಡೇನೊ?
ತಾನುಂಬುದು ಪಡಿಯಕ್ಕಿ ಒಂದಾವಿನ ಹಾಲು,
ಮಲಗುವುದರ್ದ ಮಂಚ.
ಈ ಹುರುಳಿಲ್ಲದ ಸಿರಿಯನಚ್ಚಿ ಕೆಡಬೇಡ ಮನುಜಾ!
ಒಡಲು ಭೂಮಿಯ ಸಂಗ, ಒಡವೆ ತಾನೇನಪ್ಪುದೋ?
ಕೈ ವಿಡಿದ ಮಡದಿ ಪರರ ಸಂಗ, ಪ್ರಾಣವಾಯುವಿನ ಸಂಗ
ಸಾವಿಂಗೆ ಸಂಗಡವಾರೂ ಇಲ್ಲ ಕಾಣಾ ನಿಃ ಕಳಂಕ ಮಲ್ಲಿಕಾರ್ಜುನಾ'

ಷಟ್‌ಸ್ಥಲದ ಮರ್ಮವನ್ನು ಮನೋಜ್ಞವಾಗಿ ವಿವೇಚಿಸುವುದರಲ್ಲಿ ಮಾರಯ್ಯನ ವಚನಗಳು ಮಹತ್ವದ ಪಾತ್ರ ವಹಿಸಿವೆ. ಅದರಲ್ಲಿಯೂ ಪ್ರಾಣಲಿಂಗಿ ಲಕ್ಷಣಗಳನ್ನು ವಿವರಿಸುವಲ್ಲಿಯಂತೂ ಅಪ್ರತಿಮವಾಗಿವೆ.

"ಹೆಡೆಯಿಲ್ಲದ ಸರ್ಪ ಫಲವಿಲ್ಲದ ವೃಕ್ಷ ದಯವಿಲ್ಲದ ಮಾಟ
ಇಷ್ಟದ ದೃಷ್ಟವ ಕಾಣದೆ ಚಿತ್ತ ಆತ್ಮನಲ್ಲಿ ಕಟ್ಟವಡೆಯ ಬಲ್ಲದೆ?
ಕ್ರೀಯಲ್ಲಿ ಆಚರಣೆ, ಆಚರಣೆಯಲ್ಲಿ ಅರಿವು ಶುದ್ಧವಾಗಿನಿಂದುದು
ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ,

ಇನ್ನೊಂದು ಮಹತ್ವದ ವಚನವನ್ನು ಉಲ್ಲೇಖಿಸಬಹುದು.
"ಮಹಾಮುಗಿಲಿನ ವರುಣನ ಕಿರಣದಂತ,
ಮಹಾನಿರ್ಮಲ ಶಿಲೆಯ ಮರೆಯಲ್ಲಿ ಬೆಳಗುವ ದೀಪ್ತಿಯಂತೆ
ಮಹಾಸುಕ್ಷೇತ್ರವಾಸದ ವಾಳುಕದ ಮರೆಯ ಅಪ್ಪುವಿನಂತೆ
ಇಂತೀ ದೃಷ್ಟದ ಇಷ್ಟದ ಮರೆಯಲ್ಲಿ ನಿಶ್ಚಯವ ನಿಶ್ಚಿಸಿದಲ್ಲಿ
ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನ"



ಮಲತ್ರಯಗಳನ್ನು ನಷ್ಟಮಾಡಿ ಲಿಂಗತ್ರಯಗಳನ್ನು, ಸಂಬಂಧಿಸಿದ ಕಾಯ ಪ್ರಸಾದಕಾಯವಾಗಬೇಕಷ್ಟೆ! ಇಷ್ಟಲಿಂಗ, ಪ್ರಾಣಲಿಂಗ ಭಾವಲಿಂಗಗಳು ಸ್ಥೂಲ ಸೂಕ್ಷ್ಮ, ಕಾರಣ ಶರೀರಗಳನ್ನು ಆವರಿಸಿಕೊಳ್ಳುತ್ತವೆ. ಪ್ರಾಣಲಿಂಗ ಸಂಬಂಧವನ್ನು ಕುರಿತಾಗಿ, ಮೋಳಿಗೆಯ ಮಾರಯ್ಯನ ಮೇಲಿನ ವಚನ ಮನೋಜ್ಞವಾಗಿದೆ: ಮನೋಹರವಾಗಿದೆ. ಮಾದಯ್ಯ ಲೋಕಾನುಭವಿ; ಶಿವಾನುಭವಿ. ಅತ್ಯಂತ ಹೃದಯಸ್ಪರ್ಶಿಯಾದ ದೃಷ್ಟಾಂತಗಳಿಂದ ವೀರಶೈವ ಸಿದ್ಧಾಂತವನ್ನು ನಿರೂಪಿಸುವ ಶೈಲಿ ಗಮನಾರ್ಹವಾಗಿದೆ. ಇಲ್ಲಿ ಇನ್ನೊಂದು ವಚನವನ್ನು ಪ್ರಸ್ತಾಪಿಸಬಹುದು. ಸತ್ಯ ಶುದ್ಧವಾದ ಕ್ರಿಯೆಯಿಂದ ಭಾವಶುದ್ಧಿ, ಭಾವಶುದ್ಧಿಯಿಂದ ಆತ್ಮಶುದ್ಧಿ, ಆತ್ಮಶುದ್ಧಿಯಾದರೆ ಅಲ್ಲಿ ಅರಿವು ತಾನೆ ತಾನಾಗಿ ಅರಳುವುದೆಂಬುದನ್ನು ವಿವೇಚಿಸಲಾಗಿದೆ. ಮಾನವನು ಮಹಾಮಾನವನಾಗಬೇಕು, ದೇವಮಾನವನಾಗಬೇಕೆಂಬ ಹಿರಿದಾದ ಹಂಬಲ, ಮಾನವ ನಾಗಬೇಕೆಂಬ ಹಿರಿದಾದ ಹಂಬಲ ಮಾರಯ್ಯನದು.

"ಕ್ರೀಶುದ್ಧವಾದವಂಗೆ ಭಾವಶುದ್ಧ, ಭಾವ ಶುದ್ಧವಾದವಂಗೆ ಆತ್ಮ ಶುದ್ಧ,
ಆತ್ಮ ಶುದ್ಧವಾದವಂಗೆ ಅರಿವು ಕರಿಕೊಂಡು ನಿಂದ ನಿಜವೆ
ಪ್ರಾಣ ಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ"

'ಜ್ಞಾನವೆಂಬುದು ನಿನ್ನಂತರಂಗದ ರತ್ನ ನೋಡಾ, ಎಂದು ಅಲ್ಲಮಪ್ರಭು ದೇವರು ಹೇಳಿದರೆ ಮೋಳಿಗೆಯ ಮಾರಯ್ಯನು ನಿಜ ಜ್ಞಾನಿಯ ಲಕ್ಷಣವನ್ನು ಸವಿಸ್ತಾರವಾಗಿ ಹೇಳಿದ ಪರಿ ಸೊಗಸಾಗಿದೆ.

"ಜ್ಞಾನದಲ್ಲಿ ಸುಳಿವ ಜಂಗಮ ಸ್ಥಳದ ಇರುವುಹೇಗಿರ ಬೇಕೆಂದಡೆ"
ಅಂಬುಧಿಯ ಕೂಡಿದ ಸಂಭಾವಿನಂತಿರಬೇಕು.
ಮುಖ ಶಿರ ಬೋಳಾದಡೇನೂ, ಹುಸಿ ಕೊಲೆ ಕಳವು ಪಾರದ್ವಾರ
ಅತಿಕಾಂಕ್ಷೆಯ ಬಿಡದನ್ನಕರ?
ಗಡ್ಡ, ಜೆಡೆ, ಕಂಥೆ, ಲಾಂಛನವ ತೊಟ್ಟಹ ಬಹುರೂಪರಂತೆ
ಜಗದೊಳಗೆ ಸುಳಿವ ಬದ್ಧಕತನದಲ್ಲಿ ದ್ರವ್ಯಕ್ಕೆ
ಗೊಡ್ಡೆರಗಿರುವ ದೊಡ್ಡ ಮುದ್ರೆಯಕಳ್ಳರು
ತುರುಬು ಚಿಮ್ಮರಿಗಳ ಕಟ್ಟಿ ನಿರಿಗುರುಳ ಬಾಲೆಯರಮುಂದೆ ತಿರುಗುತಿಪ್ಪ,
ಬರಿವಾಯು ಭುಂಜಕರುಗಳು ಅರಿವುಳ್ಳವರೆಂದು ಬೀಗಿ ಬೆರೆವುತಿಪ್ಪರು.
ಅರಿವಿನ ಶುದ್ಧಿಯನರಿದ ಮಹಾತ್ಮಂಗೆ ಹಲುಬಲೇತಕ್ಕಯ್ಯಾ
ಮೊಲೆಯ ಕಾಣದ ಹಸುಳೆಯಂತೆ?
ಅರಿವಿನ ಶುದ್ಧಿ ಕರಿಗೊಂಡವಂಗೆ ನರಗುರಿಗಳ ಭವನವ ಕಾಯಲೇತಕ್ಕೆ?

ಅರಿವೆ ಅಂಗವಾದ ಲಿಂಗಾಂಗಿಗೆ ಬರುಬರ ಭ್ರಾಂತರ ನೆರೆ ಸಂಗವೇತಕ್ಕೆ? ಇದುಕಾರಣ!
ತುರು ಬೆಂಬುದಿಲ್ಲ, ಜೆಡೆಯೆಂಬುದಿಲ್ಲ, ಬೋಳೆಂಬುದಿಲ್ಲ.
ಅರುಹು ಕರುಹಿಂಗೆ ಸಿಕ್ಕದು
ಅರಿದುದು ಮರೆಯಲಾಗಿ, ಮರೆದುದು ಅರಿದುದಕ್ಕೆ ಕುರುಹಿಲ್ಲವಾಗಿ
ಇಂತೀ ಸಂಚಿತ ಪ್ರಾರಬ್ಧ ಆಗಾಮಿಗೆ ಹೊರಗಾದುದು ಜ್ಞಾನ ಜಂಗಮ ಸ್ಥಳ
ಹಿಂಗಲ್ಲದೆ ಗೆಲ್ಲ ಸೋಲಕ್ಕೆ ಹೋರಿಬಲ್ಲವರಾದೆವೆಂಬವರ
ವಲ್ಲಭ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರೊಲ್ಲನಾಗಿ.

ಅತ್ಯಂತ ತರ್ಕಬದ್ಧವಾಗಿ ವಿವೇಚಿಸಿದ ಈ ವಚನವಂತೂ ಅನುಭವ ಪೂರ್ಣವಾಗಿದೆ; ಅರ್ಥಪೂರ್ಣವಾಗಿದೆ.

"ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪ ಅಣ್ಣಗಳಿರಾ ನೀವು ಕೇಳಿರೊ?
ಲಿಂಗಕ್ಕೆ ಪ್ರಾಣ ಮೊದಲೊ ಪ್ರಾಣಕ್ಕೆ ಲಿಂಗ ಮೊದಲೊ,
ಈ ಉಭಯವ ವಿಚಾರಿಕೊಂಡು ನುಡಿಯಿರಣ್ಣಾ.
ವಾಯು ಗಂಧವ ಸೋಂಕಿತೊ, ಮನವ ಲಿಂಗವರಿಯಿತೊ?
ಕಾಯದಿಂದ ಸೋಂಕಿದ ಸುಖವ ಮನದಿಂದರಿದವರಾರೊ?
ಇಂತೀ ಉಭಯುವನರಿದಡೆ, ಪ್ರಾಣಲಿಂಗಿಗಳೆಂಬೆ.
ಉರಿ ಸೋಂಕಿದ ಕರ್ಪುರಕ್ಕೆ ನಿ(ಲು)ವುದಕ್ಕೆ ನೆಲೆವನೆಯಿನ್ನಾವದೊ?
ಧೂಳು ಕೊಂಡು ಜಲಕ್ಕೆ ನೆಲೆಯಿನ್ನಾವುದೊ?
ಲಿಂಗ ಸೋಂಕಿದ ಮನಕ್ಕೆ ಲಿಂಗವನರಿವುದಕ್ಕೆ ನೆಲೆಗೊಂಬಠಾವಿನ್ನಾವುದೊ?
ಇಂತೀ ಗುಣಂಗಳಲ್ಲಿ ಕಳೆದುಳಿದ ಮಹಾತ್ಮಂಗೆ
ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ"

ಭಕ್ತನ ಲಕ್ಷಣಗಳನ್ನು ಹೀಗೆ ಹೇಳಿದುದು ಬಹು ವಿಚಾರ ಪೂರ್ಣವಾಗಿದೆ; ಸೊಗಸಾಗಿದೆ.

"ಹಿಮಾಚಲದ ಶಿಲೆಯಂತಿರಬೇಕು,
ಕುಸುಮ ಅಪುವಿನ ಸ್ನೇಹದಂತಿರಬೇಕು.
ಆಯಸ್ಕಾಂತದ ಶಿಲೆಯ ಲೋಹದಂತಿರಬೇಕು.
ಅಣಿಯೊಳಗಣ ನೇಣಿನಂತಿರಬೇಕು"

ಗಾದೆಯ ಮಾತುಗಳಂತೆ ವಚನಗಳಲ್ಲಿ ಕೋಲ್ಮಿಂಚಿನಂತೆ ಮಿಂಚುವ ಈ ನುಡಿ ಮುತ್ತುಗಳು ಹೆಚ್ಚಿನ ಬೆಲೆಯನ್ನು ತಂದಿವೆ; ಕಳೆಯನ್ನು ತಂದಿವೆ.



೧) ಊರೊಳಗಿದ್ದು ಊರ ಸುಡಬೇಕಲ್ಲದ, ಊರಹೊರಗಿದ್ದು ಸುಡಬಹುದೆ ಅಯ್ಯಾ?
೨) ದಯವೆ ಭಕ್ತಿಗೆ ಬೀಜ ಭಕ್ತಿಯೆ ಮುಕ್ತಿಗೆ ಬೀಜ, ಮುಕ್ತಿಯೆ ಸತ್ಯಕ್ಕೆ ಬೀಜ, ಸತ್ಯವೆ ಫಲಕ್ಕೆ ಬೀಜ.
೩) ಚಿತ್ರದ ಹುಲಿ ಮನುಷ್ಯನ ಕಚ್ಚ ಬಲ್ಲುದೆ, ಇತ್ಯಾದಿ.–

ಈ ವಚನಗಳಲ್ಲಿ ಕಾವ್ಯದ ಸೊಗಸಿದೆ, ಅನುಭವದ ಆಳವಿದೆ-ತತ್ವದ ಪ್ರತಿ ಪಾದನೆಯಿಂದ ಕಾಶ್ಮೀರದಿಂದ ಬಂದ ಮಾರಯ್ಯ ಕನ್ನಡ ಭಾಷೆಯಲ್ಲಿ ಸೊಗಸಾಗಿ ವಚನಗಳನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ ಈ ವಚನಗಳು ಕನ್ನಡಿಗರ ಮನ-ಮನಕ್ಕೆ ಮನೆ-ಮನೆಗೆ ಮುಟ್ಟಬೇಕಾಗಿದೆ ತಟ್ಟಬೇಕಾಗಿದೆ.

---

## ಶ್ರೀ ಎಲ್ಲರೆದೆ ತುಂಬಿರುವೆ

—ಸಿ. ಎಂ. ವೀರಣ್ಣ, ಜವುಳಿ ವ್ಯಾಪಾರ, ವಿಜಯಪುರ.

ಸಿದ್ಧಗಂಗಾ ಪ್ರಭುವೆ ಎಲ್ಲರೆದೆ ತುಂಬಿರುವೆ,
ಉದ್ಧರಿಸಿ ಭಕುತರನು ಪಾವನತೆಗೆಳಸಿರುವೆ ||ಪ||
ಧರೆಯ ಪೊರೆಯಲು ಬಂದೆ ಹರನೆ ನರರೂಪಾಗಿ।
ವರಗುರು ಶಿವಕುಮಾರ ಕಾರಣಿಕ ಶಿವಯೋಗಿ||
ಹರಿಸುತೆಲ್ಲರ ಭವವ ಕರುಣೆಯಾ ಕಡಲಾಗಿ
ವಿರತಿಯೇ ಮೈದಾಳಿ ನಿಂತಿರುವ ಸುವಿರಾಗಿ ||೧||
ದಿವರಾತ್ರಿಯೆನ್ನದೆ ತನು–ಮನಗಳ ಸವೆಸಿ।
ತ್ರಿವಿಧ ದಾಸೋಹದಿಂ ಜನಮನವ ತಣಿಸಿ||
ಶಿವನ ಮಂಗಳ ಕರುಣೆ ಎಲ್ಲೆಲ್ಲೂ ಹರಸಿ।
ಭವದೀಯ ಬೆಳಗುತಿಹೆ ಜನರ ಕಣ್ ತೆರೆಸಿ ||೨||
ವಸುಧೆಗಚ್ಚರಿ ನಿಮ್ಮ ದಾಸೋಹ ವೈಕರಿಯು।
ಎಸೆದಿತ್ತು ದಿನ ನಿತ್ಯವದ ಗಣಿಸಲಶದಳವು||
ಪಸರಿಸಿದೆ ನಾಡಿನೊಳು ಬಹುಮುಖದ ಶಿಕ್ಷಣವು||
ಅಸಮ ನೇತ್ರನೆಬಲ್ಲ ಎನಿತಿದರ ಲೀಲೆಯು ||೩||
ಭವ ಕಳೆವ ಕಾಯಕದ ಮಹಿಮೆಯರುಹಲುಬಂದ।
ಭವಹಾರಿ ಸಂಗನಾ ಬಸವೇಶನೊಲು ಮೆರೆದ||
ಶಿವತತ್ವ ಚಿಂತನೆಯ ಸರದಿಂ ಬೋಧಿಸುತ।
ಭವ ಮರಣಗಳ ಹರಿಸಿ ಮೃತ್ಯುಂಜಯನೆನಿಸಿದ ||೪||
ನಿಮ್ಮ ಮಹಿಮೆಯ ಪೊಗಳಲಸಮರ್ಥನಾನು।
ಒಮ್ಮನದಿ ನುತಿಸಲು ಕೃಪೆಗೈನೆ ನೀನು||
ಚಿಮ್ಮಿಸೆನ್ನೊಳು ಸತತ ನಿಮ್ಮಗೆಯ ಭಾವವನು।
ಚಿನ್ಮಯನೆ ಹರಸೆಂದು ಕರಮುಗಿದು ಬೇಡುವೆನು ||೫||
ಶ್ರೀಗುರುವೆ ನೀನೊಲಿದು ನಡೆದುದೇ ಪಾವನವು।
ರಾಗರಹಿತನೆ ನಿನ್ನ ವಚನ ಸಂಜೀವಿನಿಯು||
ಬಾಗಿ ನಮಿಸಿದ ನರನ ಜನುಮ ಪಾವನವು।
ಯೋಗಿ ಕುಲತಿಲಕ ನಿಮ್ಮ ವರದ ಹಸ್ತ ಅಭಯವು ||೬||
ಕಾವಿಯುಡುಗೆಯ ತೊಟ್ಟು ಪಾದುಕೆಯ ಧ್ವನಿಗೂಡಿ।
ಶೀವಿದಾಕಾಯ್ದೊಡಿಗೆ ಮೆಣ್ ಭಸಿತ ನೊಸಲೊಳು ಸೂಡಿ||
ಭಾವಪರುಷದ ಚಿತ್ತ ಮಂದಹಾಸದಿ ಮೂಡಿ।
ದೇವ ಗುರು ಸ್ವೀಕರಿಸು ವೀರೇಶಕುವರನ ತೊದಲುನುಡಿ ||೭||
ಸಿದ್ಧಗಂಗಾ



## ಶ್ರೀ ಗುರು ಮಹಂತ

ಉದ್ದಾನ ಶಿವಯೋಗಿ ಕರಕಮಲ ಸಂಜಾತ।
ಸಿದ್ಧಾಂತಗಳ ಸೀಮೆ ಮೀರಿ ಮೆರೆದ ಮಹಂತ ||ಪ||
ಸಿದ್ಧಗುರುದೇವ ಶಿವಕುಮಾರೇಶ ಸುಚರಿತ।
ಉದ್ಧರಿಸಿ ಪೊರೆಎಮ್ಮ ಕೈ ಬಿಡದೆ ಅನವರತ ||ಅ||ಪ||
ಗುರುವಿನಾಣತಿಯಂತೆ ಮಠದ ಸೂತ್ರವ ಹಿಡಿದೆ
ವರ ಸಿದ್ಧಲಿಂಗಯತಿ ಕರುಣವನೆ ಪಡೆದೆ||
ಸರಳ ನಡೆ-ನುಡಿಯಿಂದೆ ಸಕಲ ವಿದ್ಯೆಯ ಕಲಿತೆ।
ಗುರುತರದ ಹೊಣೆ ಹೊತ್ತು ಅನವರತ ದುಡಿದೆ ||೧||
ಎನಿತೆನಿತೊ ಕಷ್ಟಗಳ ಬಾಲ್ಯದೊಳು ಅನುಭವಿಸಿ।
ಅನುದಿನವು ಮೂರ್ಕಾಲ ತಪದ ಶಕ್ತಿಯ ಗಳಿಸಿ||
ಘನವೆತ್ತು ನಾಡಿನೊಳು ಮಠದ ಕೀರ್ತಿಯ ಮೆರೆಸಿ
ಜನತೆ ಧಾವಿಸುತಿಹರು ಸಾಸಿರ ಸಾಸಿರಕೂ ಮಿಗೆಲೆನಿಸಿ ||೨||
ಜಾತಿಮತಗಳ ಮೀರಿ ಸಕಲ ಜನಕಾಶ್ರಯ ವಿತ್ತು।
ನೀತಿ ನೇಮವ ಕಲಿಸಿ ಊಟ ವಸತಿಯ ನಿತ್ತು||
ಪ್ರೀತಿಯಿಂ ಬಾಲಕರ ಪೋಷಣೆಯ ಹೊಣೆ ಹೊತ್ತು।
ಖ್ಯಾತಿ ಪಡೆದ ದಾಸೋಹ ಮಿಗಿಲೆನಿಸಿ ಮೆರೆದಿತ್ತು ||೩||
ಕಾಯಕವೆ ಕೈಲಾಸ ನುಡಿ ಕಣಕಣದಿ ತುಂಬಿಹುದು।
ಬಾಯನುಡಿಯಲ್ಲಿವಿದು ಅನವರತ ಸಾಗಿಹುದು||
ಕಾಯಶ್ರಮ ಲೆಕ್ಕಿಸದೆ ಕ್ಷೇತ್ರವಿದು ಬೆಳೆದಿಹುದು।
ಜೀಯ ಶ್ರೀ ಗುರುವೆ ನಿಮ್ಮ ಶಿವಯೋಗ ಮಹಿಮೆಯಿದು ||೪||
ಪರಿಪೂರ್ಣ ಕಳೆಯುಳ್ಳ ಚಂದ್ರಮಗೆ।
ಇರದೆ ಬಂದೆರಗುವುದು ಗ್ರಹಣ ದೋಷವು ಮಿಗೆ||
ಪರಿ ಪರಿಯ ತೊಡಕುಗಳು ಬಂದಡರಲು ನಿಮಗೆ।
ಪರಶಿವನ ಕರುಣೆಯಿಂ ಹರಿದು ನಿರ್ಮಲವಾಗೆ ||೫||
ಸಿದ್ಧಲಿಂಗೇಶ್ವರರು ತಪಗೈದ ತಾಣವಿದು||
ಸಿದ್ಧಿಸಿದ ತಪಕೊಲಿದ ಗಂಗಾಮಾತೆ ಕರುಣವಿದು||
ಸಿದ್ಧಶಿವಯೋಗಿಗಳು ಮೆರೆದು ಹರಸಿದ ಪುಣ್ಯವಿದು।
ಸಿದ್ಧಗಂಗಾ ಕ್ಷೇತ್ರ ಜಗದಿ ಕೀರ್ತಿ ಪಡೆದಿಹುದು ||೬||
ಗುರುದೇವನಾಶ್ರಯದಿ ಕಲಿತ ಸುಜನರು ಪಾಡಿ।
ಮೆರೆಸಿದರು ರಜತ, ಸುವರ್ಣೋತ್ಸವವ ಮಾಡಿ||
ಭರದಿ ವಜ್ರೋತ್ಸವಕೆ ಸಜ್ಜಾಗುತಿಹ ನೋಡಿ।
ಸರಸದಿಂ ಸಾಗಲದು ವೀರೇಶ ಕರುಣೆಯದು ಕೂಡಿ ||೭||

# ಕರ್ನಾಟಕ ಸಾಧನೆ-ಪ್ರಗತಿಗೆ ನಾಂದಿ

## ಸ್ವತಂತ್ರ್ಯ ದಿನಾಚರಣೆ ಉತ್ತಮ ಮತ್ತು ಆಶಾದಾಯಕ ಭವಿಷ್ಯಕ್ಕಾಗಿ ಅಲ್ಪಾವಧಿಯಲ್ಲೇ ವಿನೂತನ ಕ್ರಮಗಳು.

ಕರ್ನಾಟದ ಭವಿಷ್ಯವನ್ನು ರೂಪಿಸುವ ಜವಾಬ್ದಾರಿಯನ್ನು ವಹಿಸಿಕೊಂಡಾಗ ಮುಂದಿದ್ದ ಸಮಸ್ಯೆಗಳು ದಿಗ್ಭ್ರಮೆ ಉಂಟು ಮಾಡಿದವು ಆರ್ಥಿಕ ಸಂಯಮ ಮತ್ತು ಕ್ರಿಯಾತ್ಮಕ ಕಾರ್ಯ ವೈಖರಿ ಮೂಲಕ ಪರಿಸ್ಥಿತಿಯನ್ನು ನಿಭಾಯಿಸಿ ರಾಜ್ಯಕ್ಕೆ ಹೊಸ ಆಯಾಮ ನೀಡಿ ಜನತೆಯ ಜೀವನ ಸಂಮೃದ್ಧವಾಗುವಂತೆ ಮಾಡಲಾಗುತ್ತಿದೆ.

ಸೇಂದಿ ಮಾರಾಟದಿಂದ ಬೊಕ್ಕಸಕ್ಕೆ 60 ಕೋಟಿ ರೂ. ನಷ್ಟವಾದರೂ 'ಸೆಕೆಂಡ್ಸ್' ಮಧ್ಯ ಮಾರಾಟ ರದ್ದು, ಸಾರಾಯಿ ಮಾರಾಟ ಕರ ಹೆಚ್ಚಳ, ಮಾರಾಟತೆರಿಗೆ, ಸಾರಿಗೆ ಶುಲ್ಕ, ಸ್ಟ್ಯಾಂಪ್ಸ್ ಹಾಗೂ ನೋಂದಣಿ ಶುಲ್ಕಗಳ ಪರಿಣಾಮ ಕಾರಿ ಸಂಗ್ರಹದಿಂದಾಗಿ 550 ಕೋಟಿ ರೂ. ಹೆಚ್ಚಿನ ಆದಾಯ ಲಭಿಸಿದೆ. ಈ ಹಿನ್ನೆಲೆಯಲ್ಲಿ 671-90 ಕೋಟಿ ರೂ. ಹಳೇಬಾಕಿ ತೀರಿಸಿ ಅಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಜೊತೆಗೆ ಸರ್ಕಾರಿ ವೆಚ್ಚದ ಸಾಧಕ ಭಾದಕಗಳ ಸಮೀಕ್ಷೆಗೆ ರಾಜ್ಯ ಹಣಕಾಸು ಮಂಡಳಿಯನ್ನು ಸಹ ಸ್ಥಾಪಿಸಲಾಗಿದೆ.

ರಾಜ್ಯದಲ್ಲಿ ಧಕ್ಷ ಹಾಗೂ ಸ್ವಚ್ಛ ಆಡಳಿತ ನೀಡುವ ದೃಷ್ಟಿಯಿಂದ ಕೆಲವು ಬಿಗಿ ಕ್ರಮ ತೆಗೆದುಕೊಂಡು ಆಡಳಿತ ಯಂತ್ರಕ್ಕೆ ಪುನಶ್ಚೇತನ ನೀಡಲಾಗಿದೆ. ಭ್ರಷ್ಟಚಾರಿ, ನಿರುಪಯೋಗಿ ನೌಕರರನ್ನು ನಿವೃತ್ತಿಗೊಳಿಸುವ ಇಲ್ಲವೆ ವಜಾಗೊಳಿಸುವ ಕ್ರಮಕ್ಕಾಗಿ ಶ್ರೇಷ್ಠ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರ ನೇತೃತ್ವದಲ್ಲಿ ಪರಿಶೀಲನಾ ಸಮಿತಿ ಸ್ಥಾಪನೆ ಮಾಡಲಾಗಿದೆ.

ಕೊಂಕಣ ರೈಲು ಮಾರ್ಗ ಕರಾವಳಿ ಪ್ರದೇಶಗಳ ವಾಣಿಜ್ಯ ಮತ್ತು ಕೈಗಾರಿಕಾ ಅಭಿವೃದ್ಧಿಗೆ ಸಹಕಾರಿಯಾಗುವುದರ ಜೊತೆಗೆ ಮಂಗಳೂರು. ಮುಂಬೈ ನಡುವೆ 1050 ಕಿ.ಮೀ. ದೂರ ಕಡಿಮೆಯಾಗಲಿದೆ. ರಾಜ್ಯ ಸರ್ಕಾರ ಈ ಯೋಜನೆಗೆ ತನ್ನ ಪಾಲಾದ 37.5 ಕೋಟಿ ರೂಗಳನ್ನು ಒದಗಿಸಿದೆ.

ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯನ್ನು ತೊಡೆದು ಹಾಕುವ ದೃಷ್ಟಿಯಿಂದ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿಗೆ ಈ ವರ್ಷ ಆಯವ್ಯಯದಲ್ಲಿ ನೀಡಿರುವ 53 ಕೋಟಿ ರೂಗಳ ಜೊತೆಗೆ ಇನ್ನು 50 ಕೋಟಿ ರೂ. ವಿಶೇಷ ಸಹಾಯಧನವನ್ನು ಸರ್ಕಾರ ಒದಗಿಸಿದೆ.

ಪರಿಶಿಷ್ಟ ಜಾತಿ ವರ್ಗಗಳ ಶ್ರೆಯೋಭಿವೃದ್ಧಿಗೆ ವಿಶೇಷ ಗಮನ ನೀಡಲಾಗಿದೆ ಅರಣ್ಯ ಜಮೀನು ಬಿಟ್ಟು. ಸರ್ಕಾರದ ಜಮೀನಿನಲ್ಲಿ ಬಗರ್‌ಹುಕುಂ ಸಾಗುವಳಿ ಸಕ್ರಮ, ಜನತಾಮನೆ ನಿರ್ಮಾಣಕ್ಕಾಗಿ 15 ಕೋಟಿ ರೂ. ಮೀಸಲು, ಮೆಟ್ರಿಕ್ ಪೂರ್ವ, ಮೆಟ್ರಿಕ್ ನಂತರ ಹಾಗೂ ಅಶ್ರಮ ಶಾಲೆಗಳ ವಿದ್ಯಾರ್ಥಿಗಳಿಗೆ ಊಟ



ಹಾಗೂ ಹಾಸಿಗೆ ಭತ್ಯೆಯಲ್ಲಿ ಗಣನೀಯ ಹೆಚ್ಚಳ. ಡಾ || ಬಿ. ಆರ್. ಅಂಬೇಡ್ಕರ್ ಅವರ ಜನ್ಮ ಶತಾಬ್ದಿ ಅಂಗವಾಗಿ ಬೆಂಗಳೂರಿನಲ್ಲಿ ಅಂಬೇಡ್ಕರ್ ಭವನ ನಿರ್ಮಾಣ ಇವು ಸರ್ಕಾರ ಈ ವರ್ಷ ಮಾಡಲಿರುವ ಪ್ರಮುಖ ಕಾರ್ಯಗಳು.

ಕೇಂದ್ರ ಸರ್ಕಾರದ ಸಾಲ ಮನ್ನಾ ಸೂತ್ರಕ್ಕೆ ರಾಜ್ಯ ಸರ್ಕಾರ ತಾತ್ವಿಕವಾಗಿ ಒಪ್ಪಿಕೊಂಡು 1989ರ ಅಕ್ಟೋಬರ್ 2ರವರೆಗೆ ರೈತರು ಪಡೆದಿರುವ ಹತ್ತು ಸಾವಿರ ರೂಗಳವರಗಿನ ಸಾಲವನ್ನು ಮನ್ನಾಮಾಡಲಿದೆ. ರಾಜ್ಯದ ಒಂದು ಸಾವಿರ ಹಳ್ಳಿ-ಗಳಿಗೆ ನೀರು ಪೂರೈಕೆ ಮತ್ತು ನೈರ್ಮಲ್ಯಕ್ಕಾಗಿ ವಿಶ್ವ ಬ್ಯಾಂಕ್ ನೆರವಿನ 143 ಕೋಟಿ ರೂ ಸಮಗ್ರ ಯೋಜನೆ. ಗ್ರಾಮೀಣ ಪ್ರದೇಶಗಳಲ್ಲಿ ಸುಧಾರಿತ ಶೌಚಾಲಯಗಳ ನಿರ್ಮಾಣ-ನಿರ್ಮಲ ಗ್ರಾಮಯೋಜನೆ.

ಶಿಕ್ಷಣಕ್ಕೆ ಹೆಚ್ಚಿನ ಉತ್ತೇಜನ ನೀಡುವ ದೃಷ್ಟಿಯಿಂದ 48 ಕೋಟಿರೂ. ವೆಚ್ಚದಲ್ಲಿ 18,000 ಕ್ಕೂ ಹೆಚ್ಚು ಶಿಕ್ಷಕರನ್ನು ನೇಮಿಸಲಾಗುವುದು. ಶಾಲಾಕೊಠಡಿಗಳನ್ನು 10 ಕೋಟಿ ರೂ. ವೆಚ್ಚದಲ್ಲಿ ಈ ವರ್ಷ ಕಟ್ಟಲಾಗುವುದು. ಉತ್ತಮ ವೈದ್ಯಕೀಯ ಸೇವೆ ಒದಗಿಸಲು ಆಸ್ಪತ್ರೆಗಳಿಗೆ 2845 ವೈದ್ಯಕೀಯ ಸಿಬ್ಬಂದಿಗಳನ್ನು ನೇಮಿಸಲಾಗುವುದು.

ಪ್ರತ್ಯೇಕ ಕನ್ನಡ ವಿಶ್ವವಿದ್ಯಾಲಯ ಹಂಪೆಯಲ್ಲಿ ಸಾಕಾರವಾಗಲಿದೆ. ಇದಕ್ಕಾಗಿ ಸರ್ಕಾರ ಒಂದು ಕೋಟಿ ರೂ. ನೀಡಿದೆ. ಕನ್ನಡದ ಸಮಗ್ರ ಅಭಿವೃದ್ಧಿಗೆ 50 ಲಕ್ಷ ರೂ. ಗಳನ್ನು ಒದಗಿಸಿದ್ದು, ಕನ್ನಡ ಪುಸ್ತಕಗಳ ಪ್ರಕಾಶನ, ಮುದ್ರಣ ಸಾಮಗ್ರಿ ಇತ್ಯಾದಿ ಕಾರ್ಯಕ್ರಮಗಳಿಗೆ ಉತ್ತೇಜನ ನೀಡಲಾಗಿದೆ.

ವಿವಿಧ ನ್ಯಾಯಾಲಯಗಳಲ್ಲಿ ಬಹಳ ದಿನಗಳಿಂದ ಇತ್ಯರ್ಥವಾಗದೇ ಉಳಿದಿರುವ ಕೌಟಂಬಿಕ ಹಾಗೂ ಅಪಘಾತ ಪ್ರಕರಣಗಳನ್ನು ತ್ವರಿತವಾಗಿ ಬಗೆಹರಿಸಲು ಲೋಕ ಅದಾಲತ್‌ಗಳನ್ನು ನಡೆಸಿ 1,91,715 ಪ್ರಕರಣಗಳನ್ನು ಇತ್ಯರ್ಥ ಮಾಡ-ಲಾಗಿದೆ. ಇತ್ತೀಚಿಗೆ ಬೆಂಗಳೂರಿನಲ್ಲಿ ನಡೆದ ಲೋಕ ಅದಾಲತ್ ಸಮಾವೇಶ ಒಂದರಲ್ಲೇ 5 ಸಾವಿರ ಪ್ರಕರಣಗಳನ್ನು ಇತ್ಯರ್ಥಗೊಳಿಸಿ ದಾಖಲೆ ಮಾಡಲಾಗಿದೆ.

ಗ್ರಾಹಕರ ಹಿತರಕ್ಷಣೆಗೆ ರಾಜ್ಯಮಟ್ಟದ ಆಯೋಗ ಸೇರಿದಂತೆ ಬೆಂಗಳೂರು, ಮೈಸೂರು ಗುಲ್ಬರ್ಗಾ ಮತ್ತು ಬೆಳಗಾವಿಗಳಲ್ಲಿ ವಿಭಾಗ ಮಟ್ಟದ ಮಂಡಳಿಗಳನ್ನು ಸ್ಥಾಪಿಸಿದ್ದು ಪ್ರತಿಜಿಲ್ಲೆಗಳಲ್ಲಿ ಅದರ ಶಾಖೆಯ ಉಪನಿರ್ದೇಶಕರಿಗೆ ನೀಡುವ ಮನವಿ-ಗಳನ್ನು ಜಿಲ್ಲಾಮಟ್ಟಲ್ಲಿ ಇತ್ಯರ್ಥಗೊಳಿಸಲಾಗುವುದು.

ಜನತೆಯ ಆಶೆ-ಆಶೋತ್ತರಗಳಿಗೆ ಸ್ಪಂದಿಸಲು ಈ ಸರ್ಕಾರ ಅಧಿಕಾರಕ್ಕೆ ಬಂದ ಅಲ್ಪಾವಧಿಯಲ್ಲೇ ಕೈಕೊಂಡ ಕೆಲವು ಸಕ್ರಿಯಾ ಕ್ರಮಗಳು, ಇನ್ನು ತ್ವರಿತಪ್ರಗತಿಯನ್ನು ಸಾಧಿಸಲು ಹಲವಾರು ಯೋಜನೆಗಳು ರೂಪುಗೊಳ್ಳುತ್ತಿವೆ. ಸ್ವಾತಂತ್ರ್ಯ ದಿನೋತ್ಸವದ ಈ ಶುಭ ಸಂದರ್ಭದಲ್ಲಿ ಸರ್ಕಾರ ಜನರ ಆಶೋತ್ತರಗಳನ್ನು ಪೂರೈಸಲು ಪುನರ್ ಸಮರ್ಪಿಸಿಕೊಳ್ಳುತ್ತದೆ.

ಕರ್ನಾಟಕ ವಾರ್ತೆ.

# ಮಡಿವಾಳ ಮಾಚದೇವರ ವ್ಯಕ್ತಿತ್ವ

ಟಿ.ಆರ್. ಮಹಾದೇವಯ್ಯ 578-8 ನೇ ಮುಖ್ಯರಸ್ತೆ. ಮಾಗಡಿ–ಕಾರ್ಡ್‌ರಸ್ತೆ. ವಿಜಯನಗರ-40

ಶಿವಶರಣರ ಸಮೂಹದಲ್ಲಿ ಮಡಿವಾಳ ಮಾಚದೇವನದು ವಿಶಿಷ್ಟ ವ್ಯಕ್ತಿತ್ವ. ಆತ ಪೌರುಷದ ವೀರ ನಿಷ್ಠೆಯ ಪ್ರತಿರೂಪ. ಅಷ್ಟೇ ಅಲ್ಲ, ಪಾವನಚರಿತನಾದ ಆತ ನೈರ್ಮಲ್ಯ, ಸುಜ್ಞಾನ, ಸದ್ಗುಣಗಳ ಪ್ರತಿರೂಪ-ಆತನು ವೀರಬದ್ರನ ಅವತಾರಿ ಎಂಬ ಪೂಜ್ಯಭಾವನೆಗೂ ಪಾತ್ರ. ಬಿಜಾಪುರ ಜಿಲ್ಲೆ, ಸಿಂದಗಿ ತಾಲ್ಲೂಕು ಹಿಪ್ಪರಿಗೆಯ ಕಲ್ಲಿನಾಥ ದೇವಸ್ಥಾನದ ಸ್ಥಾನಪತಿ ಕಲಿದೇವರ ಶಿಷ್ಯ ಮಾಚಯ್ಯ, ಕಲ್ಯಾಣಕ್ಕೆ ಶಿವಶರಣರ ಬಟ್ಟೆಗಳನ್ನು ಮಡಿ ಮಾಡಿಕೊಡುವ ಕಾಯಕ ಕೈಗೊಂಡು ಮಹಾನುಭಾವಿಯೆನಿಸಿದನು.

ಮಾಚಿದೇವ ಭಕ್ತರ ಮಾಸಿದ ಬಟ್ಟೆಗಳನ್ನು ಮೂಟೆಗಟ್ಟಿ ಆತ್ಮದುಬ್ಬಿಯಲ್ಲಿ ಸ್ತುತ್ಯಷ್ಟವಾದ ಸಮಿಧೆಯನಿರಿಸಿ ಜ್ಞಾನಾಗ್ನಿಯ ಪ್ರಭಾವದಿಂದ ಉಬ್ಬೆ ಕಾಯ್ಸಿಟ್ಟು ಸೂರ್ಯೋದಯಕ್ಕೆ ಮುಂಚೆಯೇ ಹೊಳೆಗೆ ಹೋಗಿ ಹರುಷ ಪ್ರವಾಹದಿಂದ ತೊಳೆಯುತ್ತಿದ್ದನು. ಅನಂತರ ಶಿವರಸದ ಗಂಜಿಯನ್ನಿಕ್ಕುತ್ತಿದ್ದನು. ಘಳಿಗೆಮಾಡಿ ಆ ದಿವ್ಯ ವಸ್ತುಗಳನ್ನು ರಜತಾದ್ರಿಯಂತೆ ಹೊತ್ತು ತಂದು ಭಕ್ತರ ಮನೆ ಮನೆಗೆ ಮುಟ್ಟಿಸಲು ಹೊರಡುತ್ತಿದ್ದನು. ಒಂದು ಕೈಲಿ ವೀರ ಘಂಟೆ ಭಾರಿಸುತ್ತಾ ಇನ್ನೊಂದ ಕೈಲಿ ಖಡ್ಗ ಝುಳಪಿಸುತ್ತ ಭವಿಗಳು ಕಾಣಿಸಿಕೊಳ್ಳದಂತೆ ಸಂದಿಸಿದರಾದೊಡೆ ಇರಿದು ಕೆಡಹುವೆನು. ಜಡಭವಿಗಳಿರ ತೊಲಗಿಂ ಭೋ ಎಂದು ಎಚ್ಚರಿಸಾಗುತ್ತಿದ್ದನು.

ಮಾಚಿದೇವ ಶಿವಶರಣರ ಬಟ್ಟೆಗಳನ್ನಷ್ಟೇ ತೊಳೆಯಲಿಲ್ಲ; ಮನವನ್ನು ತೊಳೆದು ಮಡಿ ಮಾಡಿದ. ಅಂತೆಯೇ 'ಮಾಚಿದೇವನ ಮಡಿಯ ನುಡದ ಶರಣರಿಲ್ಲ. ಅವನ ನಿರ್ಮಲ ಪ್ರಸಾದದಿಂದ ಪುನೀತವಾಗುವ ಪ್ರಮಥರಿಲ್ಲ' ಎನ್ನುವಂತಾಯಿತು. ಮಾಚಿದೇವನ ವ್ಯಕ್ತಿತ್ವವನ್ನರಿಯಲು ನಮಗೆ ಮೂರು ಸಾಧನೆಗಳಿವೆ.

1. ಸಮಕಾಲೀನ ಶರಣರ ಮಾತುಗಳು.
2. ಅನಂತರದ ಕವಿಗಳ ಬಣ್ಣನೆಗಳು
3. ಅಂತರಂಗದರ್ಶಿಯಾದ ಅವನ ವಚನಗಳು.

**1. ಸಮಕಾಲೀನ ವಚನಕಾರರು**

ಅನೇಕ ಶಿವಶರಣರು ಮಡಿವಾಳ ಮಾಚಯ್ಯನನ್ನು ಕುರಿತು ತಮ್ಮ ವಚನಗಳಲ್ಲಿ ಪ್ರಸ್ತಾಪ ಮಾಡಿದ್ದಾರೆ. ಆ ಮಾತುಗಳಲ್ಲಿ ಮಾಚಿದೇವನ ಮಹಿಮಾಸ್ಪದ ವ್ಯಕ್ತಿತ್ವವನ್ನು ಕಂಡುಕೊಳ್ಳಲು ಸಾಧ:-



ಅ) ಸುಜ್ಞಾನ ಪ್ರಭೆಯ ಹಾಸಿ ಮಹಾಜ್ಞಾನದಲ್ಲಿ ನಿರ್ಭಾವ ಸಂಪನ್ನನಾದ
ಮಡಿವಾಳನ ಮಡಿಯ ಪ್ರಸಾದವ ನಾನು ಹೊದೆದ ಕಾರಣ ನಿರ್ಮಳ
ನಾದೆನು. ನಿಜೈಕ್ಯನಾದೆನು. ನಿಶ್ಚಿಂತನಾದೆನು.
ಮಡಿವಾಳನ ಕೃಪೆಯಿಂದ ನಾನು ಬದುಕಿದೆನು ಕಾಣಾ ಗುಹೇಶ್ವರಾ.

—ಅಲ್ಲಮಪ್ರಭು

ಆ) ಎನ್ನ ಕಾಯವ ಶುದ್ಧ ಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ
ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ
ಕೂಡಲಸಂಗಮದೇವಾ ಎನ್ನ ನಿನಗೆ ಯೋಗ್ಯವ ಮಾಡಿದಾತ ಮಡಿವಾಳ

—ಬಸವಣ್ಣ

ಎಂದು ಆರಂಭವಾಗುವ ಈ ಭಾಗದಲ್ಲಿ ಮಾಚದೇವನೂ ಸೇರಿದಂತೆ ಅನೇಕ ಅನುಭಾವಿಗಳ ಸಂವಾದಗಳಿವೆ. ಸಮಸ್ಯೆಗಳಮೇಲೆ ಸುಜ್ಞಾನ ಪ್ರಕಾಶವನ್ನು ಹೊಮ್ಮಿಸಿ ಬದುಕಿನ ಮೌಲ್ಯಗಳನ್ನು ಎತ್ತಿ ಹಿಡಿಯಲಾಗಿದೆ.

ಎಲ್ಲಾ ಕವಿಗಳು ಮಾಚಯ್ಯನ ಜೀವನದ ಎರಡು ಘಟನೆಗಳನ್ನು ತಪ್ಪದೆ ಉಲ್ಲೇಖಿಸಿದ್ದಾರೆ. ಅ ಮಾಚದೇವ ತಾನು ನೀಡಿದ ಎಚ್ಚರಿಕೆಯನ್ನು ಮೀರಿ ಬಂದ ಭವಿಯನ್ನು ಕೊಂದುದು, ಅದರ ಪರಿಣಾಮ, (ಆ) ಬಸವಣ್ಣನಲ್ಲಿ ಸುಳಿದ "ತಾನು ಬೇಡಿದುದನ್ನು ಕೊಡುವೆನೆಂಬ" ಅಂಹಕಾರವನ್ನು ಹೋಗಲಾಡಿಸಿದ್ದು.

(ಅ) ಭಕ್ತನಲ್ಲದವನು ಶಿವಶರಣರ ಮಡಿವಸ್ತುಗಳನ್ನು ನೋಡ ಬಾರದು. ಅದಕ್ಕೆ ಅವರ ಸುಳಿವು ಬೀಳಬಾರದು. ಅದು ಮಾಚಯ್ಯನ ವೀರನಿಷ್ಠೆ. ಅಂತೆಯೆ ಆತ ಎಚ್ಚರಿಕೆ ಕೊಡುತ್ತಾ ಸಾಗುತ್ತಿದ್ದ. ಉದ್ಧಟತನದಿಂದ ವರ್ತಿಸಿದ ಭವಿಯನ್ನು ಆತಕೊಂದೇ ಬಿಟ್ಟ। ದೊರೆಗೆ ದೂರು ಹೋಯಿತು. ಆತ ಮುನಿದು ಅವನ ಮೇಲೆ ಮದ್ದಾನೆಯನ್ನು ಬಿಡುವಂತೆ ಆಜ್ಞಾಪಿಸಿದ. ಮಾಚಿದೇವ ಅದನ್ನು ನಾಶಪಡಿಸಿದ. ಬಸವಣ್ಣ ರಾಜ ಬಿಜ್ಜಳನಿಗೆ ಮಾಚಯ್ಯನ ಮಹಿಮೆಯನ್ನು ತಿಳಿಸಿ ಹೇಳಿ ಶರಣಾಗುವಂತೆಮಾಡಿದನು.

(ಆ) ಇನ್ನು ಎರಡನೆಯದು ಬಸವಣ್ಣನವರ ಕಣ್ಣು ತೆರೆಸಿದ. ಬಸವಣ್ಣ ಶರಣರು ಬೇಡಿದನ್ನು ಈಡೇರಿಸುವೆನೆಂದು ಶಪಥ ಮಾಡಿದ್ದರು, ಬೇಡುವವರಿಲ್ಲದೆ ಬಡವಾದೆ ಎನ್ನುತ್ತಿದ್ದರು ಇದನ್ನು ಕಂಡ ಮಾಚಯ್ಯ 'ಬಸವಣ್ಣನಿಗೆ ಇಂಥ ದುರಹಂಕಾರವೆ? ಶರಣರು ದೀನರೇ? ಬಸವಣ್ಣ ದಾತರನೆ,? ಎಂದು ಪಶ್ನಿಸಿ ಒಂದು ಪವಾಡ ನಡೆಸಿ ಬಸವಣ್ಣನವರ ಕಣ್ಣು ತೆರೆಸಿದನು.

ಬಸವ ಪುರಾಣದಲ್ಲಿ ಇದರ ಪ್ರಸ್ತಾಪವಿದೆ.

ಬಸವನ ವಿವೇಕಿಯಾದವನು
ಹೊಸತೆನೆಗೆ ಕಲಿನಾಥ ಇದುಗ
ವಿಸಿದನಕಟಾ ದೀನಂ ಮಾಡಿದಡೆ ಜಂಗಮನ।
ವಸುಧೆಯೊಳು ತಾನೀವವಂ ಗಡ
ಹಸನವ್ಯೆ ನುಡಿ ಈ ನುಡಿಯನಾ
ಲಿಸುವರೇ ಶಿವ ಭಕ್ತರುಗಳತಿದೋಷವಹುದಲ್ಲಿ. (೨೧-೪೭)

ಷಡಕ್ಷರ ದೇವ 'ವೃಷಭೇಂದ್ರ ವಿಜಯ' ದಲ್ಲಿ ಇದೇ ಪ್ರಸಂಗವನ್ನು ಮತ್ತಷ್ಟು ರೋಚಕವಾಗಿ ಚಿತ್ರಿಸಿದ್ದಾನೆ. 'ಬೇಡಿದರ್ಗೆ ಬೇಡಿತ್ತ ನೀವೆ. ನೀಡದಿರ್ದಡೆ ತಲೆದಂಡ ಕೂಡಲ ಸಂಗ. ಬೇಳ್ಪರಿಲ್ಲದೆ ಆನು ಬಡವಾದೆನಯ್ಯ', ಎಂಬ ಬಸವಣ್ಣನ ಮಾತು ಮಡಿವಾಳಯ್ಯನಿಗೆ ಬೆರಗು ತಂದಿತು. 'ಏನೆಂಬೆನಿದಂ, ಶರಣರು ದೀನರು ಗಡ! ಬಸವಂ ಬೇಳ್ವವಸ್ತುವಂ ಕುಡುವ ಮಹಾದಾನಿ ಗಡ। ಮಹೀನುತ ಸದ್ಭಕ್ತಿಭಾವಂ ಇಂತಿರ ಬೇಡಾ। ಕಡುಚಾಗಿಯೆಂಬ ಬಿಂಕಂಮನದೋಳ್ ಗರಿಗಟ್ಟುತೆ ಭಕ್ತಿರಸಂ ಬರತುದೆ? ಬಸವಂ ವಿವೇಕವಂ ನೀಗಿದನೇ? ಆತನ ಗೀತಮಾನಾತನ ಮಾತಂಸಲೆ ಮಾಣ್ಬುದು; ನಡೆ ನೋಡು ಬಸವ. ಶರಣರ ಬಡತನವಂ ತೋರ್ಪೆ ಎಂದು ಕಾಲಿನಿಂದ ಹೊಳೆಯ ನೀರನ್ನು ಚಿಮ್ಮಿದಾಗ ನವರತ್ನಗಳು ಸೂಸಿದವಂತೆ। ಇದನ್ನು ಲಕ್ಕಣ ದಂಡೇಶನ ಶಿವತತ್ತ್ವ ಚಿಂತಾಮಣಿಯಲ್ಲಿ ಪ್ರಸ್ತಾಪಿಸಿದ್ದಾನೆ.

ಸಿರಿ ಬಡತನಗಳನು ಭಕ್ತರೇಂ ಬಲ್ಲರೇ
ಯರಿದಿದಾಂ ನಿನಗೆ ದೃಷ್ಟವ ತೋರಿಸುವೆನೆನುತ
ಚಾಣದಿಂ ಚಲ್ಲಲುದಕವ ವಸ್ತ್ರಗಳ ಮೇಲೆ ನವರತ್ನವಾಗೆ ಕಂಡು
ಪರಮ ಭಕ್ತರ ಹವಣನಾವನರಿವನೆನುತ
ಚರಣಕಭಿವಂದಿಸಿಯೆ ತಿರಿಗಿದಾ ದಂಡೇಶಂ
ಹರನ ಮಹಿಮೆಯ ತೋರಿ ಮೆರೆದು ಮಾಚಯ್ಯಗಳ
ಚರಣಾಂಭುಜಕೆ ಶರಣು (೩೭-೩೨)

ಇ) ಅಘಟಿತ ಘಟಿಕವೆಂಬ ಮಹಾಘನವ ಸಾಧಿಸುವರೆ, ಮಡಿವಾಳನ ಕೃಪೆಯಿಲ್ಲ
ದನ್ನಕ್ಕರ ಎಂತರಿಯ ಬಪ್ಪುದು ನಿಜಲಿಂಗೈಕ್ಯವನು, ಕೂಡಲ ಚೆನ್ನಸಂಗಮ
ದೇವರಲ್ಲಿ ಮಡಿವಾಳನ ಕೈಯಲ್ಲಿ ಸ್ವಾಯತವಾದೆನು ಕಾಣಾ ಪ್ರಭುವೆ
—ಚೆನ್ನಬಸವಣ್ಣ



ಈ) ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ ಮಡಿವಾಳಯ್ಯನ ನಿಷ್ಠೆ
ಇಂತಹವರ ಕರುಣ ಪ್ರಸಾದ ಎನಗಾಯಿತು ಚೆನ್ನಮಲ್ಲಿಕಾರ್ಜುನ,
—ಅಕ್ಕಮಹಾದೇವಿ.

ಇವಲ್ಲದೆ ಇನ್ನೂ ಅನೇಕ ಜನ ವಚನಕಾರರು ಮಾಚಿದೇವನನ್ನು ಸ್ಮರಿಸಿ, ಅವನ ಮಹಾ ಮಣಿಹವನ್ನು ಕೊಂಡಾಡಿದ್ದಾರೆ. ಈ ಮಾತು ಗಮನಾರ್ಹವಾಗಿದೆ: ಕಲ್ಪಿತವ ಕಳೆದು ಅಕಲ್ಪಿತವ ತಿಳುಹಿದ: ಮನವ ಮಾಣಿಸಿ ಘನವ ನೆಲೆಗೊಳಿಸಿದ. ತನುವ ಕೆಡಿಸಿ ಅನುವ ಸ್ಥಾಪ್ಯವ ಮಾಡಿದ, ಅಂತರಂಗದಲಿ ಮಹಾಜ್ಞಾನವ ತುಂಬಿದ, ಬಹಿರಂಗದಲ್ಲಿ ಸದಾಚಾರವ ನೆಲೆಗೊಳಿಸಿದ; ಇದು ಸಾಮಾನ್ಯವಾದ ಕಾರ್ಯವಲ್ಲ! ಮಹಾಶರಣರ ಸಂಪರ್ಕದ ಪರಿಣಾಮ ಹೀಗಿತ್ತು; ವಾರಿಕಲ್ಲಪುತ್ಥಳಿಯನಪ್ಪಿಕೊಂಡಂತೆ, ಅಗ್ನಿಯ ಮುಸುಕನು ತೆಗೆದ ಕರ್ಪೂರದಂತೆ, ಕತ್ತಲೆಯೊಳಗೆ ಬೆಳಕು ಹೊಕ್ಕಂತೆ, ಬೇರಿಲ್ಲದಿಪ್ಪ ಪರಿ! ಒಟ್ಟಾರೆ ಶರಣರ ದೃಷ್ಟಿಯಲ್ಲಿ ಮಾಚಿದೇವ ಬೆಳಕಿನೊಳಗಣ ಬೆಳಕು, ಮಹಾಬೆಳಕು! ಘನದೊಳಗಣ ಘನ, ಮಹಾಘನ.

ಶರಣರ ಮನದ ಮೈಲಿಗೆಯ ಕಳೆದ ನಿಸ್ಸೀಮನೀತ, ಗುರುಲಿಂಗ ಜಂಗಮ
ತತ್ವಗಳನ್ನು ತೊಳೆದು ನಿರ್ಮಲಗೊಳಿಸಿದ ಶ್ರೇಯ ಈತನದು. ಈ ಮಹಾಮಹಿಮ
ಒಬ್ಬ ವ್ಯಕ್ತಿ ಮಾತ್ರವಲ್ಲ ಅದ್ಭುತಶಕ್ತಿ: ತನ್ನ ಅನುಭವದ ತಿಳಿಜಲದಲ್ಲಿ ಪಂಚ
ಕರ್ಣೇಂದ್ರಿಯಗಳನ್ನು ಶುಚಿಗೊಳಿಸಿದ ಪಾವನಮೂರ್ತಿಯೆಂದು ಶರಣರು
ಮಾಚಯ್ಯನಿಗೆ ನಮನಗಳನ್ನು ಸಲ್ಲಿಸಿದ್ದಾರೆ. ಕೃಪೆ. ಶರಣಸೌರಭ.

# ಕನಸಿನ ಕನ್ಯೆ ವೈಜ್ಞಾನಿಕ ಕಿರುಧಾರಾವಾಹಿ-8.

ಪ. ರಾಮಕೃಷ್ಣ ಶಾಸ್ತ್ರಿ, "ಶಿವಶಕ್ತಿ ನಿಲಯ," ಮಜ್ಜಿನ, ದಕ್ಷಿಣ ಕನ್ನಡ ಜಿಲ್ಲೆ.

ಇಕ್ಕಡೆಯಿಂದ ಮಹಾಪರ್ವತಗಳೆದ್ದು ಎದ್ದು ನಿಂತು, ಅದರ ಮಧ್ಯೆ ಪುಟ್ಟದಾದ ಬೆಟ್ಟ–ಆ ಪರ್ವತಗಳ–ಮರಿಯಂತೆ ನಿಂತಿತ್ತು. ಸುತ್ತಲೂ ಕುರುಚಲು ಕಾಡು; ಎತ್ತರೆತ್ತರವಾದ ಹೆಮ್ಮರಗಳು. ಅದೇ ಪುಟ್ಟಬೆಟ್ಟದ ತುದಿ ವಿಶಾಲವಾಗಿತ್ತು. ಅಲ್ಲಿಗೆ ಯಾರಾದರೂ ಬಂದಾರೆಂಬ ಭಯವಾಗಲೀ ಶಾಂತಿಯನ್ನು ಕದಡುವ ಘಟನೆಗಳು ನಡೆದಾವು ಎಂದು ಎಣಿಸಲೇ ಸಾಧ್ಯವಿಲ್ಲದುದರಿಂದ ರಾಣಿ ಉಮಾ ತನ್ನ ಕನಸಿನ ನೂತನ ಪ್ರಯೋಗಶಾಲೆ ಅಲ್ಲೇ ಆಗಲಿ ಎಂದು ಆ ಕಿರುಬೆಟ್ಟದ ತುದಿಯಲ್ಲಿ ಅರಮನೆಯೊಂದನ್ನು ಕಟ್ಟಿಸಿ ಭದ್ರವಾದ ಕೋಟೆಗೆ ಸ್ವಾಮಿ ಭಕ್ತರಾದ ಸೇವಕರನ್ನು ಕಾವಲಿಗಾಗಿ ನೇಮಿಸಿದಳು. ಆಗಾಗ ಅಲ್ಲಿಗೆ ಅವಳೇ ಸ್ವತಃ ಬಂದು ಕಾರ್ಯಪರಿಶೀಲನೆ ಮಾಡಿಕೊಂಡು ಹೊರಟು ಹೋಗುತ್ತಿದ್ದಳು.

ಪಂಡಿತ ರಾಣಿಗೆ ಮಾತು ಕೊಟ್ಟಂತೆ ತಾನು ಕೈಗೊಂಡ ಮಹತ್ಕಾರ್ಯದ ಅರಿವಿನಿಂದ ಎಚ್ಚರವಾಗಿ ಪ್ರಯೋಗವನ್ನು ಯಶಸ್ಸಿನೆಡೆಗೆ ಕೊಂಡೊಯ್ಯಲು ದಕ್ಷತೆಯಿಂದ ಕಾರ್ಯಪ್ರವೃತ್ತಿಸಿದ್ದ. ತನಗಿತ್ತ ಸಂಪೂರ್ಣಾಧಿಕಾರದಿಂದ ಹೆಣ್ಣು, ಗಂಡನ್ನು ಅರಸಿ ಬೇರೆ ಬೇರೆ ಕೋಣೆಯಲ್ಲಿಟ್ಟು. ತನ್ನ ಔಷಧವನ್ನು ಅವರ ಮೇಲೆ ಪ್ರಯೋಗಿಸಿದ್ದ. ಬೆಳಕೆಂಬುದನ್ನು ಕಾಣದ ಆ ಗಂಡು ಹೆಣ್ಣು ಔಷಧಿ ಪ್ರಭಾವದಿಂದ ತನಗೆ ಇದೊಂದು ಸೆರೆಮನೆ ಎಂಬುದನ್ನು ನೆನೆಸದೆ ಸ್ವಚ್ಛಂದವಾಗಿ ಅದರೊಳಗೆ ಇದ್ದರು. ಅವರನ್ನು ಪಂಡಿತ ಸೂಕ್ಷ್ಮವಾಗಿ ನೋಡುತ್ತಿದ್ದ. ಅವರಲ್ಲಾಗುವ ಬದಲಾವಣೆಗಳನ್ನು ನಿರೀಕ್ಷಿಸುತ್ತಿದ್ದ.

ಒಂದು ದಿನ ಪಂಡಿತ ಗಂಡು, ಹೆಣ್ಣನ್ನು ನೋಡಿ ಪಕ್ವಕಾಲ ಬಂದುಂತೆ ಎಣಿಸಿದ ಹಾಗೆಯೇ ಇಬ್ಬರ ಸಹಾಯದಿಂದ ಗಂಡನ್ನು ಕರಕೊಂಡು ಬಂದು ಹೆಣ್ಣಿನ ಕೋಣೆಗೆ ಬಿಟ್ಟು, ಬಾಗಿಲನ್ನು ಹಾಕಿದ. ಗಂಡು ಔಷಧ ಪ್ರಭಾವಿತನಾಗಿ ಮನುಷ್ಯತ್ವವನ್ನು ಕಳೆದು ಕೊಂಡಿದ್ದರೆ ಹೆಣ್ಣು ಅದೇ ರೀತಿಯಲ್ಲಿದ್ದಳು.

ಗಂಡು ಒಂದು ಕ್ಷಣ ಕೋಣೆಯ ಸುತ್ತಲೂ ನೋಡಿದ. ಹೆಣ್ಣು ಮುಂದೆ ಮುಂದೆ ಬರುತ್ತಿದ್ದಳು. ಗಂಡು ಪಶುವಿನಂತೆ ಹೆಣ್ಣಿನ ಮೈಮೇಲೆ ಹಾರಿ ಅವಳನ್ನು ತನ್ನ ವಜ್ರ ಬಾಹುಗಳಿಂದ ಹಿಡಿದ.

ಎಲ್ಲವು ಪಶುತನವೇ ಆಗಿತ್ತು. ಕ್ಷಣಗಳು ಉರುಳಿದವು. ಗಂಡಿನ ಕೈಗಳು ಶಿಥಿಲವಾದವು ಹೆಣ್ಣು-ಗಂಡನ್ನು ಬೀಸಿ ಅತ್ತ ಒಗೆದಿತ್ತು. ಗಂಡು ವಿಲಿ ವಿಲಿ ಒದ್ದಾಡಿ ನಿರ್ಜೀವವಾಗಿ ಅಲ್ಲಿ ಬಿದ್ದಿದ್ದ. ಆ ಹೆಣವನ್ನು ಅತ್ತ ಸಾಗಿಸಲು ದಾಸಿಯರು ಬಂದಿದ್ದರು. ಆಗ ಹೆಣ್ಣು ಅವರನ್ನು ಕ್ರೂರವಾಗಿ ನೋಡಿ ಗಹಗಹಿಸಿ ನಕ್ಕಳು.

ಸಿದ್ಧಗಂಗಾ



ಪಂಡಿತ ತನ್ನ ಕೆಲಸವನ್ನು ತನ್ನ ಮನದ ಭೂತಗನ್ನಡಿಯಿಂದ ನೋಡಿ-ಸೂಕ್ಷ್ಮಾತಿ ಸೂಕ್ಷ್ಮ ದಿಂದ ಕಾರ್ಯ ಪ್ರವೃತ್ತಿಸುತ್ತಿದ್ದ. ಎಲ್ಲೂ ತಪ್ಪು ಹೆಜ್ಜೆ ಇಡಲು ಸಾಧ್ಯವೇ ಇರಲಿಲ್ಲ. ಅಂಥ ಒಂದು ಪುಟ್ಟ ತಪ್ಪೂ ತನ್ನ ಪ್ರಾಣವನ್ನೆ ಬಲಿ ತೆಗೆದೀತೆಂದು ಸ್ಪಷ್ಟವಾಗಿ ಅವನಿಗೆ ಗೊತ್ತಿದೆ ಆದುದರಿಂದ ತಾಳ್ಮೆಯಿಂದ ಪ್ರಯೋಗವನ್ನು ಮುಂದುವರಿಸುತ್ತ ಬಂದ. ರಾಟೆಯಲ್ಲಿ ಕರಿ, ಬಿಳಿ ಬಣ್ಣದ ನೂಲುಗಳು ತಿರುಗುತ್ತಲೇ ಇದ್ದುವು. ರಾಣಿ ಆಗಾಗ ತನ್ನ ಪಲ್ಲಕಿಯಲ್ಲಿ ಕುಳಿತು ಬರುವಳು. ಅಲ್ಲಿನ ಕಾರ್ಯಗಳನ್ನು ನೋಡಿ ತೃಪ್ತಿಪಟ್ಟುಕೊಂಡು ಹೊರಟು ಹೋಗುವಳು. ಪಂಡಿತ ಹೆಮ್ಮೆಯಿಂದ ಇಂದಿನ ತನಕ ಆದ ತನ್ನ ಪ್ರಯೋಗದ ಯಶಸ್ಸನ್ನು ಹೇಳುವನು. ರಾಣಿ ತಲೆದೂಗುವಳು. ತನ್ನ ಕನಸು ನನಸಾಗಲು ಇನ್ನು ಹೆಚ್ಚು ದಿನ ದೂರವಿಲ್ಲ. ಎಂದ ಸಂತೋಷಿಸುವಳು.

ಆ ದಿನ ಪಂಡಿತ ಚಿಂತೆಯೊಂದರಿಂದ ತಲೆಗೆ ಕೈ ಹೊತ್ತು ಮುಂದೇನಾಗಲಿದೆಯೋ ಎಂಬ ಭೀತಿಯಿಂದ ತತ್ತರಿಸಿ ಕುಳಿತಿದ್ದ. ರಾಣಿ ಬರುವ ಸಮಯವಾಗಿತ್ತು. ಅವಳಿಗೆ ಹೇಗೆ ಈ ಸುದ್ದಿಯನ್ನು ಹೇಳಲಿ ಅವಳು ತಾಳ್ಮೆಯಿಂದಲಾದರೂ ಹೇಗೆ ಇರುವಳು ಎಂದು ನೆನಸಿಕೊಂಡು ಉದ್ವಿಗ್ನವಾಗಿ ಕುಳಿತಿದ್ದ.

ದೂರದಿಂದ ಕುದುರೆಗಳ ಖುರ ಪುಟಗಳು ಕೇಳಿಸಿದೊಡನೆಯೇ ಪಂಡಿತ–ಬೆಚ್ಚಿದ. ಗುಡ್ಡದ ಓರೆಯಲ್ಲಿ ಧೂಳು ಕಾಣಿಸುತ್ತಿತ್ತು. ಕುದುರೆ ಸ್ವಾರರು ಅತ್ತಲೇ ಬರುತ್ತಿದ್ದರು. ‘ ದೇವ ಬದುಕಿಸು , ಎಂದು ಪಂಡಿತ ಮನದಲ್ಲಿ ದೇವರಿಗೆ ಕೈಮುಗಿದುಕೊಂಡ

ಬಂದವಳು ರಾಣಿ. ಆಕೆ ತನ್ನ ಕುದುರೆಯಿಂದ ಹಾರಿ ಪುಟ್ಟ ಚೆಂಡಿನಂತೆ ಒಳಗೆ ಹೊಕ್ಕು ನೋಡಿದಳು. ಚಿಂತಿತ ವದನನಾದ ಪಂಡಿತನನ್ನು ನೋಡಿದ ರಾಣಿ, “ ಏನು ಹೀಗಿದ್ದೀರಿ ? ” ಎಂದು ಹೇಳಿದಳು.

“ ನಾವು ನೆನಸಿದಂತೆ ಆಗಲಿಲ್ಲ. ದೈವೇಚ್ಛೆ ಬೇರೆಯೇ ಇತ್ತು ” ಶುಷ್ಕವಾಗಿ ನುಡಿದ ಪಂಡಿತ.

“ ಹಾಂ ! ಈಗ ಆದುದಾದರೂ ಏನು ? ಅರಮನೆಗೆ ಶುಭ ಸಮಾಚಾರ ಕಳುಹಿಸಿದಿರಲ್ಲ ? ” ರಾಣಿ ಆಶ್ಚರ್ಯದಿಂದಲೂ ಏನೊ ಅನಾಹುತವಾಗಿದೆ ಎಂಬ ಭಯದಿಂದಲೂ ಬೆರೆತ ಧ್ವನಿಯಲ್ಲಿ ಕೇಳಿದಳು.

“ ವಾರ್ತೆಯೇನೋ ಶುಭವೇ ಆಗಿದೆ. ಆದರೆ ನಾವು ನೆನಸಿದಂತೆ ಆಗಲಿಲ್ಲ ”

“ ಅಂದರೆ.... ? ನಮಗರ್ಥವಾಗಲಿಲ್ಲ... ! ”

" ನಾನು ಮೊನ್ನೆಯೇ ಹೇಳಿದೆನಲ್ಲ- ಗರ್ಭಪಾತ್ರೆಯಿಂದಲೂ ದೊಡ್ಡದಾಗಿ ಶಿಶು ಬೆಳೆಯುತ್ತಿದೆ. ಹೊರಗೆ ಬರಲ ತೀರ ಕಷ್ಟವಾದೀತು ಎಂದು ಹಾಗೆಯೇ ಆ ಶಿಶುವಿನ ಬೆಳವಣಿಗೆ ಇನ್ನು ಎಂಟು ದಿನವಿತ್ತು ಎನ್ನುವಾಗ ತಾಯ ಗರ್ಭವನ್ನು ಸೀಳ ಬೇಕಾಯಿತು. ಹಾಗೆಯೇ ಸೀಳ ಶಿಶುವನ್ನು ಹೊರಗೆ ತೆಗೆದಾಗ ತಾಯಿ ಕಣ್ಮುಚ್ಚಿದಳು. ಅದು ನನಗೆ ಅಷ್ಟೊಂದು ನೋವನ್ನು ಕೊಡುವುದಿಲ್ಲ ಮಹಾರಾಣಿ. ಆದರೆ...." ಪಂಡಿತ ತಡೆದ.

" ಏನು, ಆ ಶಿಶುವೂ ಸತ್ತಿತ್ತೇ ? " ಉದ್ವೇಗದಿಂದ ಕೇಳಿದಳು ರಾಣಿ.

" ಇಲ್ಲ ಇಲ್ಲ. ಉದ್ವೇಗಗೊಳ್ಳದಿರಿ ಮಹಾರಾಣಿ. ಹಾಗೇನೂ ಆಗಿಲ್ಲ. ಆದರೆ ಆ ಶಿಶು ನಾವು ನೆನೆಸಿದಂತೆ......."

" ಅಂದರೆಎಲ್ಲ ಮನುಷ್ಯರಂತೆಯೇ ಆದೀತು ಎಂದಲ್ಲವೇ ನೀವು ಹೇಳುವುದು ? ಅದನ್ನತ್ತ ಬಿಸುಟು ಬಿಡಿ. ಇನ್ನೊಂದು......."

" ಎಲ್ಲ ಮನುಷ್ಯರಂತೆ ಆಗಲಾರದು ಮಹಾರಾಣಿ. ನೀವು ಎಷ್ಟು ಕ್ರೂರ ವಾಗಿ ವರ್ತಿಸಬೇಕೆನ್ನುತ್ತೀರೋ ಅದರಿಂದಲೂ ಹೆಚ್ಚಾಗಿ ಅದನ್ನು ಕ್ರೂರ ಹಿಂಸ್ರ ಪಶುವನ್ನಾಗಿ ಮಾಡುವ ಆದರೆ, ಆ ಶಿಶು..."

" ಹುಂ, ಆ ಶಿಶು......... ಬೇಗನೆ ಹೇಳಿ, ತಡವರಿಸುವುದೇಕೆ? "

"ಹೆಣ್ಣಾಗಿದೆ....? ಪಂಡಿತ ತೊದಲುತ್ತ ಹೇಳಿದ. ಆ ಮಾತು ಕೇಳಿ ರಾಣಿಗಹಗಹಿಸಿ ನಕ್ಕಳು. ಆಕೆ ನುಡಿದಳು " ಇಷ್ಟೇ ತಾನೆ ನೀವು ಹೇಳಲು ಅಂಜುತ್ತಿದ್ದುದು ! ಲಿಂಗದಲ್ಲಾದರೂ ಏನಿದೆ ? ನಾನು ಗುಣವನ್ನು ಮಾತ್ರ ಸ್ವೀಕರಿಸುತ್ತೇನೆ. ಆ ಶಿಶು ಹೆಣ್ಣಾಗಲಿ, ಗಂಡಾಗಲಿ, ನಪುಂಸಕವೇ ಆಗಲಿ ನನಗದರ ಗೊಡವೆಯಲ್ಲ. ಅದರ ಗುಣ ಮಾತ್ರ ಕ್ರೂರವಾಗಿ ಹೃದಯವೇ ಇಲ್ಲದ ಅಂಥ ಪಶು ವಿನಂತಿರಬೇಕು. ಇಷ್ಟನ್ನು ನೀವು ಮಾಡಿಕೊಟ್ಟರೆ ಸರಿ...."

" ಖಂಡಿತ. ಹಾಗೆ ಮಾಡಿಕೊಡ ಬಲ್ಲೆ. ಆಕೆಯನ್ನು ಶಾಶ್ವತ ರಾಕ್ಷಸಿಯ ನ್ನಾಗಿ ಒಂದು ದಿನ ಮಾಡಿಬಿಡುತ್ತೇನೆ ಮಹಾರಾಣಿ. ಆದರೆ ಅದು ಈಗಿಂದೀಗ ಸಾಧ್ಯವಿಲ್ಲ. ಇನ್ನು ಇಲ್ಲಿ ಮನುಷ್ಯರ ಸಂಚಾರ ಇರಬಾರದು-ಇದ್ದರೂ ಅವರು ಮುಖವಾಡ ಧರಿಸಬೇಕು. ಮುಖವಾಡ ಧರಿಸದೆ ಯಾರು ಯಾವ ಸಂದರ್ಭದಲ್ಲೂ ಈ ವಠಾರದಲ್ಲಿ ಅಲೆದಾಡಬಾರದು-ಇಲ್ಲದೆ ಆಕೆಗೊಬ್ಬ ನೂತನ ಶಿಕ್ಷಕ ಬೇಕಾಗಿದ್ದಾನೆ. ಹೊಸ ತೆರನ ಪಾಠಗಳನ್ನಾಕೆಗೆಹೇಳಿ, ಪ್ರತಿಯೊಂದು ವಿಷಯದಲ್ಲಿ ದ್ವೇಷ ಬೆಳೆಯುವಂತೆ ಯತ್ನಿಸಲು ಸಮರ್ಥನಾದ ಶಿಕ್ಷಕನಾಗಬೇಕು. ಅದಷ್ಟನ್ನು ಕರುಣಿಸಿರಿ. ಮುಂದಿನ ಕಾರ್ಯಭಾರ ನನ್ನ ಮೇಲೆ" ಎಂದು ಭರವಸೆ ಕೊಡುತ್ತ ಪಂಡಿತ ನುಡಿದ.



"ಅವೆಲ್ಲವೂ ಸಿದ್ಧವಾಗುವುದು ಪಂಡಿತರೇ. ನಿಮ್ಮ ಕಾರ್ಯವನ್ನು ಮಾತ್ರ ಯಶಸ್ಸಿನಿಂದ ನೆರವೇರಿಸಿರಿ ನೋಡೋಣ ಆ ಶಿಶುವನ್ನು" ಎಂದಳು ರಾಣಿತೃಪ್ತಿಗೊಂಡ ಮನಸ್ಸಿನಿಂದ.

ಪಂಡಿತ ಶಿಶುವನ್ನು ತೋರಿಸಿದ ದಷ್ಟಪುಷ್ಟವಾಗಿ ಸುಂದರವಾಗಿತ್ತು ಮಗು. ಅದರ ನೀಲವಾದ ಕಣ್ಣುಗಳು ಬೆಳಕಿನೊಡನೆ ಆಡುತ್ತಿತ್ತು. ಕೈ ಕಾಲು ಹೊಡೆಯುತ್ತ ಆ ಮಗು ಗಾಳಿಯೊಡನೆ ಗುದ್ದಾಡುತ್ತಿತ್ತು. ಅದನ್ನು ನೋಡಿ ತುಂಬು ತೃಪ್ತಿಯಿಂದ ಉಮಾ ಅದರ ಮುಂದೆ ಚಿಟಿಕೆ ಬಾರಿಸಿದಳು. ತನ್ನ ಸಂಕಲ್ಪಸಿದ್ಧಿಯ ಪಿಂಡ ಇಂದೆಂದು. ಸಂತಸದ ಗಾಳಿಯಲ್ಲಿ ಗರಿಗೆದರಿ ಹಾರಿದಳು. ಮುಂದೆ ಆ ಶಿಶುವಿನಿಂದ ಜರಗಲಿರುವ ಮಹತ್ಕಾರ್ಯಗಳನ್ನು ನೆನೆಸಿ ಹಿಗ್ಗಿದಳು. ವೈರಿ ಸಮೂಹದಲ್ಲಿ ಮತ್ತಗಜದಂತೆ ಘೀಳಿಟ್ಟು ನಡೆದು ಜನರನ್ನು ಮೆಟ್ಟಿ ಪರಚಿ, ಹರಿದು ಬಿಸುಡಲಿರುವ ಆ ಘೋರ ಅದರೂ ಸುಂದರವಾದ ದೃಶ್ಯವನ್ನು ಕಂಡು ಈಗಲೇ ನಲಿದಳು. ಹಾಗೆಯೇ ಪಂಡಿತ ನೆಡೆಗೆ ತೃಪ್ತಿಯಿಂದ ನೋಡಿ, ಜಾಗ್ರತೆಯಾಗಿರಿ ಪಂಡಿತರೇ. ಮಹಾರಾಣಿಯ ಆಸೆ ಎಂಬುದು ನೆನಪಿರಲಿ" ಎಂದು ಹೇಳಿ ವೇಗವಾಗಿ ನಡೆದಳು.

ರಕ್ಷಕ ಭಟ ಕುದುರೆಯ ಮೂಗುದಾರ ಹಿಡಿದು ನಿಂತಿದ್ದವ ರಾಣಿಯನ್ನು ಕಂಡು ಬಾಗಿನಿಂತ. ರಾಣಿ ಒಂದೇ ನೆಗೆತಕ್ಕೆ ಕುದುರೆಯ ಮೇಲೆ ಏರಿ, ಗಾಳಿಯಂತೆ ಓಡಿಸಿದಳು. ರಕ್ಷಕ ಭಟನೂ ತನ್ನ ಕುದುರೆಯೊಡನೆ ಹಿಂಬಾಲಿಸಿದ. ರಾಣಿಯ ಮನಸ್ಸು ಸಂತಸದಿಂದ ಗರಿಬಿಚ್ಚಿ ಕುಣಿಯುತ್ತಿತ್ತು.

---

# ಕ್ಷೇತ್ರ ವಾರ್ತೆ

ದಿನಾಂಕ: 29-7-90 ರಂದು ಮಧ್ಯಾಹ್ನ 2 ಘಂಟೆಗೆ ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಮಹಾ ಪಾಠಶಾಲಾವತಿಯಿಂದ ಅಧ್ಯಯನ ಗೋಷ್ಠಿಯನ್ನು ವ್ಯವಸ್ಥೆಗೊಳಿಸಲಾಗಿತ್ತು. ಪೂಜ್ಯ ಶ್ರೀ ಶ್ರೀ ಸಿದ್ದಲಿಂಗಸ್ವಾಮಿಗಳವರು ಶ್ರೀ ಸಿದ್ದಗಂಗಾ ಮಠ ಇವರ ದಿವ್ಯ ಸಮ್ಮುಖದಲ್ಲಿ ಸಂಸ್ಕೃತ ಭಾಷೆಯ ಮಹತ್ವ ಎಂಬ ವಿಷಯ ನಿರೂಪಣೆಯನ್ನು ವಿದ್ವಾನ್ ಶ್ರಿ ಶೇಷಾಚಲ ಶರ್ಮರು ನಡೆಸಿಕೊಟ್ಟರು. ಕನ್ನಡ ಮತ್ತು ಸಂಸ್ಕೃತ ಭಾಷೆಯ ಭಾಂಧವ್ಯದ ಬಗ್ಗೆ ಶ್ರೀ ಹೆಚ್.ವಿ. ವೀರಭದ್ರಯ್ಯನವರು ನಡೆಸಿ ಕೊಟ್ಟರು.

ದಿನಾಂಕ 7-8-90ನೇ ಮಂಗಳವಾರ ಸಂಜೆ 6 ಘಂಟೆಗೆ ಸಂಯುಕ ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭವನ್ನು ಆಚರಿಸಲಾಯಿತು. ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿದ್ಯದಲ್ಲಿ ಜರುಗಿದ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎ. ಎ. ಶೆಟ್ಟಿ, ನಿರ್ದೇಶಕರು ಹಿಂದುಳಿದ ವರ್ಗಗಳು ಮತ್ತು ಅಲ್ಪ ಸಂಖ್ಯಾತರ ಇಲಾಖೆ ಕರ್ನಾಟಕ ರಾಜ್ಯ ಇವರು ವಹಿಸಿದ್ದರು. ಸಂಘದ ಉದ್ಘಾಟನೆಯನ್ನು ಶ್ರೀ ಎಂ. ಎಲ್. ಚಂದ್ರಕೀರ್ತಿಯವರು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಕರ್ನಾಟಕ ರಾಜ್ಯ ಇವರು ನಡೆಸಿಕೊಟ್ಟರು.

ದಿನಾಂಕ: 15-8-90 ರಂದು ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸ್ವಾತಂತ್ರ್ಯೋತ್ಸವವನ್ನು ಆಚರಿಸಲಾಯಿತು ಪೂಜ್ಯ ಶ್ರೀ ಶ್ರೀ ಗಳವರು ಅಧ್ಯಕ್ಷತೆ ವಹಿಸಿದ್ದರು. ತುಮಕೂರು ವಿಧಾನ ಸಭಾ ಸದಸ್ಯರಾದ ಶ್ರೀ ಎನ್. ಷಫಿಅಹಮದ್ ರವರು ಭಾಗವಹಿಸಿದ್ದರು.

ದಿನಾಂಕ: 2-9-90 ರಂದು ಭಾನುವಾರ ಮಧ್ಯಾಹ್ನ 3 ಘಂಟೆಗೆ ಸಂಸ್ಕೃತ ಕಾಲೇಜಿನ ಆಶ್ರಯದಲ್ಲಿ ಅಧ್ಯಯನ ಗೋಷ್ಠಿ ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸಲಾಗಿತ್ತು. ಮನಸ್ಸಿನ ಬಗ್ಗೆ ವಿಷಯ ನಿರೂಪಣೆಯನ್ನು ವಿದ್ವಾನ್. ಶ್ರೀ ಎಂ. ಎಲ್, ಲಕ್ಷ್ಮೀನರಸಿಂಹಭಟ್ಟರು ಮಾಡಿದರು.

ದಿನಾಂಕ: 5-9-90 ರಂದು ಶ್ರೀ ಕ್ಷೇತ್ರದ ಆವರಣದಲ್ಲಿ ಸಿದ್ದಗಂಗಾ ಸಂಯುಕ್ತ ವಿದ್ಯಾ ಸಂಸ್ಥೆಯವರ ವತಿಯಿಂದ ಶಿಕ್ಷಕ ದಿನಾಚರಣೆಯನ್ನು ಆಚರಿಸಲಾಯಿತು.

ಸಭೆಯ ದಿವ್ಯ ಸಾನ್ನಿದ್ಯವನ್ನು ಪೂಜ್ಯ ಶ್ರೀ ಶ್ರೀ ಗಳವರು ವಹಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ತುಮಕೂರು ಜಿಲ್ಲಾ ಪರಿಷತ್ ಮುಖ್ಯ ಕಾರ್ಯದರ್ಶಿಯವರಾದ ಶ್ರೀ ಹೆಚ್. ಎಂ. ಹೆಗಡೆಯವರು ವಹಿಸಿದ್ದರು.



## ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ಆಚರಿಸಲು ನಿರ್ಧಾರ

### ಹಳೆಯ ವಿದ್ಯಾರ್ಥಿಗಳ ಸರ್ವ ಸದಸ್ಯರ ವಿಶೇಷ ಮಹಾಸಭೆ

ಆಗಸ್ಟ್ 19ರಂದು ಭಾನುವಾರ ಸಿದ್ಧಗಂಗಾ ಮಠದ ಹಳೇ ವಿದ್ಯಾರ್ಥಿಗಳ ಸಂಘದ ವಿಶೇಷ ಮಹಾಸಭೆಯು ಶ್ರೀ ಮಠದ ಉತ್ತರಾಧಿಕಾರಿ ಶ್ರೀ ಶ್ರೀ ಸಿದ್ಧಲಿಂಗ-ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸೇರಿ 60 ವರ್ಷಗಳ ಡಾ|| ಶಿವಕುಮಾರಸ್ವಾಮಿಗಳ ಪೀಠಾರೋಹಣದ ವಜ್ರಮಹೋತ್ಸವವನ್ನು ಆಚರಿಸಲು ತೀರ್ಮಾನಿಸಿತು.

ರಾಜ್ಯಮಟ್ಟದಲ್ಲಿ ಈ ವಜ್ರಮಹೋತ್ಸವವನ್ನು ಏರ್ಪಡಿಸುವ ಸಲುವಾಗಿ ಶ್ರೀ ಕ್ಷೇತ್ರದ ಭಕ್ತರುಗಳಮಹಾಸಭೆಯನ್ನು ಅಕ್ಟೋಬರ್ ತಿಂಗಳ ಕೊನೆ ವಾರದಲ್ಲಿ ಸಮಾವೇಶಗೊಳಿಸಲು ನಿಶ್ಚಯಿಸಿತು.

ವಜ್ರಮಹೋತ್ಸವದ ಸವಿನೆನಪಿಗಾಗಿ ಡಾ|| ಶಿವಕುಮಾರಸ್ವಾಮಿಗಳ ಜನ್ಮ ಸ್ಥಳವಾದ ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು ವೀರಾಪುರ ಗ್ರಾಮದಲ್ಲಿ ವೃತ್ತಿ ಶಿಕ್ಷಣ ಸಂಸ್ಥೆ, ಗ್ರಾಮೀಣ ಪ್ರತಿಭಾನ್ವಿತ ವಿದ್ಯಾರ್ಥಿಗಳ ತರಬೇತಿ ಕೇಂದ್ರ ತೆರೆಯಲು ಹಾಗೂ ಮಠದ ವಿದ್ಯಾಸಂಸ್ಥೆಗಳ ವಿಶೇಷ ಅಗತ್ಯಗಳನ್ನು ಪೂರೈಸಲು ಸೂಕ್ತವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಯೋಜಿಸಲಾಗಿದೆ.

ರಾಜ್ಯದ ಎಲ್ಲಾ ಭಾಗಗಳಿಂದ ಹಳೇ ವಿದ್ಯಾರ್ಥಿಗಳು ಸಹಸ್ರಾರು ಸಂಖ್ಯೆಯಲ್ಲಿ ಸಭೆಗೆ ಆಗಮಿಸಿದರಲ್ಲದೆ ವಿದೇಶದಲ್ಲಿರುವ ಹಳೇ ವಿದ್ಯಾರ್ಥಿಗಳು ಬಂದಿದ್ದುದು ವಿಶೇಷವಾಗಿತ್ತು.

ವಜ್ರಮಹೋತ್ಸವ ಅನುಷ್ಠಾನಕ್ಕೆ ಪ್ರಪ್ರಥಮವಾಗಿ ವೀರಾಪುರದ ಗ್ರಾಮಸ್ಥರು 10 ಎಕರೆ ಜಮೀನನ್ನು ದಾನವಾಗಿ ನೀಡಲು ಒಪ್ಪಿರುತ್ತಾರೆ.

ಅಮೇರಿಕಾದ ಜಾರ್ಜಿಯಾದಿಂದ ಬಂದಿದ್ದ ಡಾ|| ಕೆ. ವಿ. ಚಂದ್ರಶೇಖರ್ ಅವರು ಈ ಮಹಾ ಕಾರ್ಯಕ್ಕೆ ಮೊದಲ ಕಂತಾಗಿ 10 ಸಾವಿರ ರೂಗಳನ್ನು. ಬೆಂಗಳೂರು ರಘುವನಹಳ್ಳಿ, ಶ್ರೀ ಚಿಕ್ಕವೀರಪ್ಪನವರು 25 ಸಾವಿರರೂಗಳು. ಅಖಿಲ ಭಾರತ ವೀರಶೈವ ಮಹಾಸಭೆಯ ಬೆಂಗಳೂರು ಘಟಕದ ಅಧ್ಯಕ್ಷ ಶ್ರೀ ಬಿ. ಎಸ್. ಪರಮಶಿವಯ್ಯನವರು ಶ್ರೀಗಳ ಹೆಸರಿನಲ್ಲಿ ಹಮ್ಮಿಕೊಳ್ಳುವ ಯೋಜನೆಗೆ 25 ಸಾವಿರ ರೂ.ಗಳನ್ನು, ಮೈಸೂರಿನಲ್ಲಿರುವ ಕರ್ನಕುಪ್ಪೆ ಶ್ರೀವೀರಭದ್ರಪ್ಪನವರು 10 ಸಾವಿರರೂಗಳನ್ನು, ತಿಪಟೂರಿನ ಸಾಸಲು, ಶ್ರೀ ನಂಜುಂಡಪ್ಪನವರು 1001 ರೂಗಳನ್ನು, ಸಭೆಗೆ ಆಗಮಿಸಿದ್ಧ ಸಹಸ್ರಾರು ಹಳೆಯ ವಿದ್ಯಾರ್ಥಿಗಳು ಈ ಸಂದರ್ಭದಲ್ಲಿ ತಮ್ಮ ಭಕ್ತಿ ಕಾಣಿಕೆಗಳನ್ನು ಅರ್ಪಿಸಲು ವಾಗ್ದಾನ ನೀಡಿದರು.

(50ನೇ ಪುಟದಿಂದ ಕ್ಷೇತ್ರವಾರ್ತೆ)

ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾಮಂಡಳಿಯ ಅಧ್ಯಕ್ಷರಾದ ಶ್ರೀಮತಿ ಎ. ಶಾರದಮ್ಮನವರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ಮಠದ ವಿದ್ಯಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಈಕೆಳಕಂಡ ಅಧ್ಯಾಪಕರುಗಳಿಗೆ

ಶ್ರೀ ಕೆ. ಎನ್. ನೀಲಕಂಠಯ್ಯ, ಶ್ರೀ ಎಂ. ಕೆ. ಗೋಪಾಲಕೃಷ್ಣ, ಶ್ರೀ ಸೋಮಶೇಖರಯ್ಯ, ಶ್ರೀ ಟಿ. ಡಿ. ರೇವಣ್ಣ, ವಿದ್ವಾನ್. ಶ್ರೀ ಎಂ. ಮಲ್ಲವೀರಯ್ಯ, ವಿದ್ವಾನ್. ಶ್ರೀ ಶಿವಶಂಕರಯ್ಯ, ಸನ್ಮಾನಿಸಿ ಗೌರವಿಸಲಾಯಿತು.

7-9-90ರಂದು ಬೆಂಗಳೂರು ವಿಶ್ವವಿದ್ಯಾನಿಲಯ ಬೆಳ್ಳಿಹಬ್ಬ ಸಮಾರಂಭ ಸಮಿತಿಯ ಸದಸ್ಯರುಗಳಾದ ಕುಲಪತಿ ಡಾ|| ಕೆ. ಹನುಮಂತಪ್ಪನವರು, ಮಾಜಿ ಕುಲಪತಿ ಶಿಕ್ಷಣ ತಜ್ಞ ಡಾ|| ಹೆಚ್. ನರಸಿಂಹಯ್ಯನವರು, ಮಾಜಿ ಶಿಕ್ಷಣ ಇಲಾಖಾ ಕಾರ್ಯದರ್ಶಿ ಪ್ರೊ|| ಸಾಮ್ಯುಯಲ್ ಅಪ್ಪಾಜಿ ಅವರು ಸೆಂಟ್ರಲ್ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಪ್ರೊ|| ಷಡಕ್ಷರಸ್ವಾಮಿ ಇವರುಗಳು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯಕ್ಕೆ ಭೇಟಿನೀಡಿದ್ದರು. ಸಂಜೆ 4ಕ್ಕೆ ಶ್ರೀಮಠಕ್ಕೆ ಭೇಟಿಯಿತ್ತು ಪರಮ ಪೂಜ್ಯ ಶ್ರೀ ಶ್ರೀ ಗಳವರ ದರ್ಶನಾಶೀರ್ವಾದವನ್ನು ಪಡೆದರು. ನಂತರ ಸಂಜೆ 6ಕ್ಕೆ ಕರ್ನಾಟಕ ಸರ್ಕಾರ ಸಾರಿಗೆ ಇಲಾಖಾ ಆಯುಕ್ತರಾದ ಸನ್ಮಾನ್ಯ ಶ್ರೀ ಜಯರಾಜ್ ರವರು ಶ್ರೀ ಮಠಕ್ಕೆ ಭೇಟಿ ನೀಡಿ ಶ್ರೀ ಶ್ರೀ ಗಳವರ ದರ್ಶನಾಶೀರ್ವಾದ ಪಡೆದರು.

---

ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ : ತುಮಕೂರು-ಜಿಲ್ಲೆ.

## ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ

**" ವಜ್ರಮಹೋತ್ಸವ " ಆಚರಣೆ ಪೂರ್ವ ಸಿದ್ಧತಾ ಸಭೆ.**

ದಿನಾಂಕ 9-9-90 ರಂದು ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರಿಸಮಿತಿ ಸಭೆ ಸೇರಿ ಪರಮ ಪೂಜ್ಯ ಶ್ರೀ ಶ್ರೀ ಗಳವರ ಪೀಠಾರೋಹಣದ " ವಜ್ರಮಹೋತ್ಸವ" ವನ್ನು ಆಚರಿಸುವ ಸಲುವಾಗಿ ನಾಡಿನಾದ್ಯಂತ ಇರುವ ಭಕ್ತಾದಿಗಳ, ಅಭಿಮಾನಗಳ ಮಹಾ ಸಭೆಯನ್ನು ದಿ 28-10-90ರ ಭಾನುವಾರ ದಂದು ಶ್ರೀ ಮಠದಲ್ಲಿ ಕರೆಯಲು ನಿರ್ಣಯ ಮಾಡಲಾಯಿತು. ಈ ಸಂದರ್ಭದಲ್ಲಿ ನಾಡಿನಾದ್ಯಂತ ಇರುವ ಹಳೆಯ ವಿದ್ಯಾರ್ಥಿಗಳ, ಹಿತೈಷಿಗಳ, ಭಕ್ತಾದಿಗಳ ವಿಳಾಸ ವನ್ನು ಸಂಗ್ರಹಿಸುವುದಕ್ಕಾಗಿ ವಿವಿಧ ಉಪ ಸಮಿತಿಗಳನ್ನು ರೂಪಿಸಲಾಯಿತು.

ಶ್ರೀ ಮಠದ ಎಲ್ಲಾ ಹಳೆಯ ವಿದ್ಯಾರ್ಥಿಗಳು ತಮ್ಮ ತಮ್ಮ ಅಂಚೆ ವಿಳಾಸಗಳನ್ನು ಸಂಘದ ಕಾರ್ಯಾಲಯಕ್ಕೆ ಕಳಿಸಿಕೊಡುವಂತೆ ವಿನಂತಿ ಮಾಡಲಾಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಮಠದ ಕಿರಿಯ ಸ್ವಾಮಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ವಹಿಸಿದ್ದರು.



ಪರಮ ಪೂಜ್ಯ ಶ್ರೀ ಶ್ರೀ ಗಳವರ ಸೆಪ್ಟಂಬರ್ ತಿಂಗಳ ಕಾರ್ಯಕ್ರಮ.

| | |
|---|---|
| 1-9-90 | ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ಕಾರ್ಯಕ್ರಮ. |
| 2-9-90 | ಬೆಂಗಳೂರು ಆರ್. ಪಿ. ಸಿ. ಲೇಔಟ್, ಸಿ. ಶಿವರುದ್ರಯ್ಯನವರ ಮನೆಯಲ್ಲಿ ಪೂಜೆ. ಬೆಂಗಳೂರು ಜಿಲ್ಲೆ. ಆನೇಕಲ್ ತಾ\|\| ಬ್ಯಾಗಡದೇವನಹಳ್ಳಿ, ಶಿವಣ್ಣನವರ ಮನೆಯಲ್ಲಿ ಪೂಜೆ. |
| 3-9-90 | ವೀರಭದ್ರಸ್ವಾಮಿ ಪ್ರತಿಷ್ಠಾಪನೆ ಕಾರ್ಯ ಸಮಾರಂಭ. |
| 4-9-90 | ತುಮಕೂರು ತಾ\|\| ಅಂತರಸನಹಳ್ಳಿ, ಶೀಬೆತೋಟದ ಚಂದ್ರಪ್ಪನವರ ಮನೆಯಲ್ಲಿ ಪೂಜೆ. ಬೆಂಗಳೂರು ಆರ್. ಪಿ. ಸಿ. ಲೇಔಟ್, ಕೆ. ಎಸ್. ಸೋಮಶೇಖರಯ್ಯನವರ ಮನೆಯಲ್ಲಿ ಪೂಜೆ. |
| 5-9-90 | ಸಂಜೆ ಶ್ರೀ ಕ್ಷೇತ್ರದಲ್ಲಿ ಶಿಕ್ಷಕರ ದಿನಾಚರಣೆ ಸಮಾರಂಭದಲ್ಲಿ. |
| 7-9-90 | ತುಮಕೂರು ತಾ\|\| ಹರಿಯಪ್ಪನಹಳ್ಳಿಯಲ್ಲಿ, ಪೂಜೆ. ಬೆಂಗಳೂರು ವಿಶ್ವವಿದ್ಯಾನಿಲಯದ ಬೆಳ್ಳಿಹಬ್ಬದ ಸಮಾರಂಭದ ಪದಾದಿಕಾರಿಗಳು ಶ್ರೀಗಳವರೊಂದಿಗೆ ಶ್ರೀ ಮಠದಲ್ಲಿ ಸಮಾಲೋಚನೆ ನಡೆಸಿದರು. |
| 9-9-90 | ತುಮಕೂರು ತಾ\|\| ಹಾಲನೂರು, ಹೆಚ್. ಗಂಗಣ್ಣನವರ ಮನೆಯಲ್ಲಿಪೂಜೆ. ಬೆ.10ಕ್ಕೆ ಸದಾಶಿವನಗರ ಚಿದಾನಂದಪ್ಪನವರ ಮನೆಯಲ್ಲಿ ಪೂಜೆ. ಸಂಜೆ 4ಕ್ಕೆ ಬೆಂಗಳೂರಿನಲ್ಲಿ ಚಿತ್ರಕಲಾ ಪರಿಷತ್‌ನಲ್ಲಿ ವಿದೇಶದಿಂದ ಪ್ರವಾಸ ಮುಗಿಸಿ ಆಗಮಿಸಿದ ಸಿರಿಗೆರೆ ಬೃಹನ್ಮಠದ ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳವರ ಸ್ವಾಗತ ಸಮಾರಂಭ. |
| 12-9-90 | ಬೆಳಿಗ್ಗೆ 10ಕ್ಕೆ ಹಾಲನೂರು ಗ್ರಾಮದಲ್ಲಿ ಕಾರ್ಯಕ್ರಮ. ಸಂಜೆ 4ಕ್ಕೆ ದೇವನಹಳ್ಳಿಯಲ್ಲಿ ಶ್ರೀ ನಗರೇಶ್ವರಸ್ವಾಮಿ ಕಲ್ಯಾಣ ಮಂಟಪದಲ್ಲಿ ನೇತ್ರಚಿಕಿತ್ಸಾಶಿಬಿರದ ಸಮಾರೋಪ ಸಮಾರಂಭ. |
| 16-9-90 | ಬೆಳಿಗ್ಗೆ 10ಕ್ಕೆ ಬೆಂಗಳೂರಿನಲ್ಲಿ ಮರಿಸ್ವಾಮಪ್ಪನವರ ಕಲ್ಯಾಣ ಮಂಟಪದ 25ನೇ ವಾರ್ಷಿಕೋತ್ಸವ. ಹೆಬ್ಬೂರು ಗಣಪತಿ ಪ್ರೌಢಶಾಲಾ ಕಟ್ಟಡದ ಆರಂಭೋತ್ಸವ. |
| 22-9-90 | ಬೆಳಿಗ್ಗೆ 10.30ಕ್ಕೆ ತುಮಕೂರು, ಶಿಕ್ಷಕಭವನದಲ್ಲಿ. ಉಪಾಧ್ಯಾಯರು ಏರ್ಪಡಿಸಿರುವ ಸಮಾರಂಭ. |
| 23-9-90 | ತುಮಕೂರು ಸೋಮೇಶ್ವರಪುರದಲ್ಲಿರುವ, ಎಸ್ ಆರ್. ಸಂಪತ್ ಅವರ ಮನೆಯಲ್ಲಿ ಪೂಜೆ |
| 26-9-90 | ಬೆಳಿಗ್ಗೆ 10ಕ್ಕೆ ಬೆಂಗಳೂರು ಚಾಮರಾಜಪೇಟೆ, ಬಿ. ಆರ್. ರೇಣುಕಪ್ಪನವರ ಮನೆಯಲ್ಲಿ ಪೂಜೆ. |
| 30-9-90 | ನೆಲಮಂಗಲ ತಾ\|\| ಹುಸ್ಕೂರು, ವೀರಪ್ಪನವರ ಹೊಸ ಮನೆ ಪ್ರವೇಶದಪೂಜೆ |

## ಆಸ್ತಿಕ ಬಂಧುಗಳಲ್ಲಿ ಒಂದು ವಿನಮ್ರ ಮನವಿ

1 ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆ ನಡೆಯುತ್ತಿದೆ.

2 ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾರೆ. ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾತಾವರಣ ಇಲ್ಲಿನ ವೈಶಿಷ್ಟ್ಯ.

3 ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿದೆ.

4 **"ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ"** ಎಂಬುದು ಗಾದೆ ಮಾತಾಗಿದೆ.

5 **" ಪ್ರಸಾದ ತೆಗೆದು ಕೊಂಡು ಹೋಗಿ "**–ಎಂಬುದೇ ಪರಮ ಪೂಜ್ಯ **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮಂತ್ರ

6 ಇಂಥ ದಾಸೋಹ ಮಣಿಹದಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರುತ್ತದೆ.

7 ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾಗಲು ಇದೊಂದು ಅಪೂರ್ವ ಅವಕಾಶ.

8 ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿಯೋಗಕ್ಕೆ ಮೀಸಲಾಗುತ್ತದೆ.

9 ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ ಮಾಡುತ್ತೀರಾಗಿ **' ಸಿದ್ಧಗಂಗಾ '** ಆಶಿಸುತ್ತದೆ.